ಖಾಸಗಿ ಪ್ರಸಾರಕ್ಕೆ ಮಾತ್ರ
ಸಂಪುಟ 7

ಜುಲೈ-ಸೆಪ್ಟೆಂಬರ್
ಸಂಚಿಕೆ 3



# ಹಣತೆ









ಸಾಹಿತ್ಯ, ಸಂಸ್ಕೃತಿ ಮತ್ತು ಕನ್ನಡ ಭಾಷೆಗಳ ಸಂವರ್ಧನೆಗೆಂದು
ಮೀಸಲಾದ ಶಿವರಾಮಕಾರಂತ ವೇದಿಕೆಯ ತ್ರೈಮಾಸಿಕ ಪತ್ರಿಕೆ



# ಶಿವರಾಮ ಕಾರಂತ ವೇದಿಕೆ [ರಿ]

"ಆದರ್ಶ", ನಂ. 307, ಹದಿನೇಳನೆಯ ಅಡ್ಡರಸ್ತೆ
ಎರಡನೆಯ ವಿಭಾಗ, ರವೀಂದ್ರನಾಥ ಟಾಗೋರ್‌ನಗರ,
ಬೆಂಗಳೂರು - 560 032.
ದೂರವಾಣಿ : 3336822 / 3336087

---

| | | |
|---|---|---|
| ಅಧ್ಯಕ್ಷರು | : | ಶ್ರೀಮತಿ ಪ್ರೇಮಾಭಟ್ |
| ಉಪಾಧ್ಯಕ್ಷರು | : | ಶ್ರೀಮತಿ ರಾಧಾಸ್ವಾಮಿ<br>ಶ್ರೀ ಎಸ್. ಆರ್. ವಿಜಯಶಂಕರ್ |
| ಕಾರ್ಯದರ್ಶಿ | : | ಶ್ರೀ ಪಾ. ಚಂದ್ರಶೇಖರ ಚಡಗ |
| ಸಹ ಕಾರ್ಯದರ್ಶಿಗಳು | : | ಡಾ|| ಆರ್. ಆರ್. ಪಾಂಗಾಳ್<br>ಶ್ರೀ ಎನ್. ಆರ್. ಶೆಟ್ಟಿ |
| ಖಜಾಂಚಿ | : | ಶ್ರೀ ಸಾ.ರಾ. ವಾರಂಬಳ್ಳಿ |

## ಕಾರ್ಯಕಾರಿ ಸಮಿತಿಯ ಸದಸ್ಯರು

ಸರ್ವಶ್ರೀ

1. ಜಿ.ಆರ್. ಸಮೀರ ಕುಮಾರ
2. ಹೆಚ್. ವಿ. ಶಿವಸ್ವಾಮಿ
3. ಸೀತಾರಾಮ್ ಪಿ.ಎಚ್.ಡಿ.
4. ನಾ. ರಾಮಸ್ವಾಮಿ
5. ಎ.ಎಸ್. ಭಟ್
6. ವಿ.ಎಸ್. ನಾಗರಾಜರಾವ್
7. ಜಿ.ಕೆ.ಎಲ್. ರಾಜನ್

ಖಾಸಗಿ ಪ್ರಸಾರಕ್ಕೆ ಮಾತ್ರ ಜುಲೈ - ಸೆಪ್ಟೆಂಬರ್ 2003

# ಹಣತೆ

ಸಂಪುಟ 7 ಸಂಚಿಕೆ 3

ಶಿವರಾಮ ಕಾರಂತ ವೇದಿಕೆಯ ಮುಖ ಪತ್ರಿಕೆ

---

## ಪರಿವಿಡಿ



ಮುಖ ಪುಟ : ಕಾರಂತರ ವಿವಿಧ ಭಂಗಿಗಳು

ಛಾಯಾಗ್ರಹಣ – ಸಂತೋಷಕುಮಾರ ಗುಲ್ವಾಡಿ

# ಓದುಗರ ಓಲೆಗಳು

ಬಿ.ವಿ. ಕೆದಿಲಾಯ

ಪ್ರಿಯ ಚಡಗರಿಗೆ

ಸಪ್ರೇಮ ವಂದನೆಗಳು

ನಿನ್ನೆ 'ವೇದಿಕೆ'ಯ ಆಶ್ರಯದಲ್ಲಿ ನಡೆದ ಗೋಕಾಕ ಸಂಸ್ಮರಣೆ ತುಂಬ ಅರ್ಥಪೂರ್ಣವೂ ಸ್ವಾರಸ್ಯಕರವೂ ಆಗಿತ್ತು. ಅನಿಲ್ ಗೋಕಾಕರ ಮಾತುಗಳು ತುಂಬ ಖುಶಿ ನೀಡಿದವು.

'ಹಣತೆ'ಯ ಏಪ್ರಿಲ್-ಜೂನ್ ಸಂಚಿಕೆಯನ್ನು ಓದಿ ಸಂತೋಷವಾಯಿತು. ನಿಮ್ಮ 'ಅಗ್ರಹಾರದಿಂದ ಅಮೇರಿಕೆಗೆ' ಚೆನ್ನಾಗಿ ಮೂಡಿ ಬರುತ್ತಿದೆ. ಜಿ.ಎಂ. ಹೆಗಡೆಯವರ ಗೋಕಾಕ 'ಸಮರಸವೇ ಜೀವನ'ದ ಸಹೃದಯ ವಿಮರ್ಶಾತ್ಮಕ ಬರಹ ತುಂಬ ಉಪಯುಕ್ತವಾಗಿದೆ.

ಅಂತೂ ನಿಮ್ಮ ಛಲ ಬಿಡದ ತ್ರಿವಿಕ್ರಮ ಸಾಹಸಕ್ಕಾಗಿ ಮತ್ತೊಮ್ಮೆ ಅಭಿನಂದನೆಗಳು.

ಇತಿ ನಿಮ್ಮ

(ಸಹಿ)



ಸನ್ಮಾನ್ಯರೇ,

ತಾವು ನೆನಪಿಟ್ಟು ಕಳುಹಿದ ಹಣತೆ ಹಾಗೂ ನಮ್ಮ ಗ್ರಂಥಾಲಯ (ಸಂ. 1/3) ತಲುಪಿದೆ. ಧನ್ಯವಾದಗಳು.

ಹಣತೆಯಲ್ಲಿಯ ನಿಮ್ಮ ಧಾರವಾಹಿ ಕಾದಂಬರಿ ಆಸ್ಥೆಯಿಂದ ಓದುತ್ತಿದ್ದೇನೆ. ಗೋಕಾಕ್‌ರ ''ಸಮರಸವೇ ಜೀವನ'' ಕುರಿತಾದ ಅವರ ಲೇಖನ ಉಚ್ಚಮಟ್ಟದ್ದಾಗಿದೆ.

ಇತಿ ನಿಮ್ಮ

ಪ್ರೊ. ಕೆ.ಎಸ್. ದೇಶಪಾಂಡೆ

ರಿಗೆ,

ಶ್ರೀ ಪಿ.ಸಿ. ಚಡಗ
ಕಾರ್ಯದರ್ಶಿ , ಶಿವರಾಮ ಕಾರಂತ ವೇದಿಕೆ
ಬೆಂಗಳೂರು.

ಮಾನ್ಯರೇ,

ವೇದಿಕೆಯ ವಿಶೇಷ ಸಂಚಿಕೆ 'ಹಣತೆ' ಯಲ್ಲಿ ಕಾರಂತರ ಬಗ್ಗೆ ಕಲೆ ಹಾಕಿದ ಮಾಹಿತಿ, ಮಾದರಿ ನೋಡಿ ಅಚ್ಚರಿಯಾಯಿತು. ಅವರನ್ನು ಹತ್ತಿರದಿಂದ ಒಳಕಣ್ಣು ಬಿಚ್ಚಿ ನೋಡಿದ ನಿಮ್ಮಂತಹವರಿಂದ ಮಾತ್ರ ಇಂತಹ ಚಿತ್ರಣ ಬಿಂಬಿಸಲು ಸಾಧ್ಯ.

''ಗ್ರಂಥಾಲಯ'' ಆರಂಭದಿಂದ ಈವರೆಗಿನ ನಡೆದು ಬಂದ ಹಾದಿ, ಯಶೋಗಾಥೆ ತಿಳಿಯಿತು. ತಮ್ಮ ಕ್ರಿಯಾಶೀಲ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿ. ''ಕುಳಿತು ಆಕಳಿಸುವವನಿಗಿಂತ ಇಳಿದು ಈಜುವುದೇ ಜೀವನ'' ಇದೇ ತಮ್ಮ ಜೀವನ ಮಂತ್ರ ಅನ್ನಿಸುವುದು.

॥ ಓ ಹಣತೆ ॥
॥ ನೀ ತಲೆಯೊಳಗೆ ಕುಣಿತೆ ॥
ಹಣತೆ ಜ್ಯೋತಿ ಕರಾವಳಿ ತೀರಕ್ಕೂ ಹರಿದು ಬರಲಿ

ಇಂತಿ ವಂದನೆಗಳು
**ಪಿ. ರಾಮಕೃಷ್ಣ ಚಡಗ**

❋❋❋

ಶ್ರೀ ಪಿ.ಸಿ. ಚಡಗರಿಗೆ,

ನೀವು ಪ್ರೀತಿಯಿಂದ ಕಳುಹಿಸಿದ ದಶಮಾನೋತ್ಸವ ವಿಶೇಷ ಸಂಚಿಕೆ ''ಹಣತೆ'' ಮತ್ತು ಇನ್ನೊಂದು ಸಂಚಿಕೆ ಹಾಗೂ ''ನಮ್ಮ ಗ್ರಂಥಾಲಯ'' ಸಂಚಿಕೆ ಬಂದಿವೆ. ''ಹಣತೆ'' ತುಂಬಾ ಹಿಡಿಸಿತು. ಭಾಷಣಗಳು ಸಂಗ್ರಾಹ್ಯವಾಗಿವೆ. ಲೇಖನಗಳು ಗಮನ ಸೆಳೆಯುತ್ತವೆ. ಅಭಿನಂದನೆಗಳು ಮತ್ತು ಕೃತಜ್ಞತೆಗಳು.

ಇಂತಿ ವಿಶ್ವಾಸಿ
**(ಎ.ಎಸ್.ಎನ್. ಹೆಬ್ಬಾರ್)**
ಅಧ್ಯಕ್ಷರು, ಉಡುಪಿ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್



# ಗೋಕಾಕ್ ಸಂಸ್ಮರಣೆ – ಒಂದು ವರದಿ

– ಶ್ರೀ ಕೆ.ವಿ. ಕೃಷ್ಣಪ್ಪ

ಭಾರತದ ಯಾವ ಭಾಷೆಗೂ ದಕ್ಕದಷ್ಟು ಸಂಖ್ಯೆಯಲ್ಲಿ ಕನ್ನಡಕ್ಕೆ ಜ್ಞಾನಪೀಠ ಪ್ರಶಸ್ತಿಗಳು ದಕ್ಕಿರುವುದು ನಮ್ಮ ನಾಡಿನ ಪುಣ್ಯ ವಿಶೇಷ. ಜ್ಞಾನಪೀಠ ಪ್ರಶಸ್ತಿ ಪುರಸ್ಕೃತರಾದ ಏಳು ಮಂದಿ ಕನ್ನಡಿಗರಲ್ಲಿ ಡಾ|| ವಿನಾಯಕ ಕೃಷ್ಣ ಗೋಕಾಕರೂ ಒಬ್ಬರು. 'ಗೋಕಾಕ್ ಚಳವಳಿ ಇದೀಗ ಮನೆ ಮಾತಾಗಿದ್ದರೂ, ಈ ಚಳವಳಿಯ ಹಿನ್ನೆಲೆ, ಉದ್ದೇಶ್ಯಗಳು ಬಹಳಷ್ಟು ಜನ ಕನ್ನಡಿಗರಿಗೆ ತಿಳಿದಿಲ್ಲ ಎಂಬ ನನ್ನ ಶಂಕೆ 13-07-2003ರಂದು ಶಿವರಾಮಕಾರಂತ ವೇದಿಕೆ, ರವೀಂದ್ರನಾಥ ಟಾಗೋರ್‌ನಗರ – ಇವರ ವತಿಯಿಂದ ಗೋಕಾಕ್ ಸಂಸ್ಮರಣೆ ಕಾರ್ಯಕ್ರಮದ ಅಂಗವಾಗಿ ನಡೆದ ಪ್ರಶ್ನೋತ್ತರದಿಂದ ಇನ್ನಷ್ಟು ಧೃಡಗೊಂಡಿತು. ಕನ್ನಡದ ಎಲ್ಲಾ ಪ್ರಮುಖ ಕವಿಗಳ, ಲೇಖಕರ ಕೃತಿಗಳಂತೆ ಗೋಕಾಕರ ಸಾಹಿತ್ಯದ ಅಧ್ಯಯನವೂ ಕನ್ನಡಿಗರ ಅವಜ್ಞೆಗೆ ಗುರಿಯಾಗಿರುವುದು ತಿಳಿದು ಬಂತು. ಕಾರ್ಯಕ್ರಮದ ಸಂಕ್ಷಿಪ್ತ ವರದಿಯನ್ನು 'ಹಣತೆ'ಯ ಓದುಗರಿಗೆ ಒಪ್ಪಿಸಲು ನಾನು ಸಂಸತಪಡುತ್ತೇನೆ.

ಅಂದಿನ ಕಾರ್ಯಕ್ರಮಕ್ಕೆ ಮುಖ್ಯ ಅತಿಥಿಗಳಾಗಿ ಕನ್ನಡದ ಪ್ರಖ್ಯಾತ ವಿಮರ್ಶಕ ಹಾಗೂ ಲೇಖಕರಾದ ಡಾ. ನರಹಳ್ಳಿ ಬಾಲಸುಬ್ರಹ್ಮಣ್ಯ ಆಗಮಿಸಿದ್ದರು. ಸ್ವಾಗತ ಭಾಷಣ ಮಾಡಿದ ಶಿವರಾಮಕಾರಂತ ವೇದಿಕೆಯ ಕಾರ್ಯದರ್ಶಿ ಪ್ರಾ. ಚಂದ್ರಶೇಖರ ಚಡಗರು ಡಾ. ನರಹಳ್ಳಿ ಬಾಲಸುಬ್ರಹ್ಮಣ್ಯರ ಸರಳತೆ, ಸಜ್ಜನಿಕೆ ಎಲ್ಲರಿಗೂ ಆದರ್ಶಪ್ರಾಯವಾಗಿದೆ ಎಂದು ಪರಿಚಯಿಸಿದರು. ಗೋಕಾಕ್‌ರ ಪುತ್ರ ಅನಿಲರನ್ನು ಪರಿಚಯಿಸುತ್ತಾ ಕೇಂದ್ರ ಸರ್ಕಾರದ ಸಂಪರ್ಕ ಇಲಾಖೆಯ ಅತ್ಯುನ್ನತ ಹುದ್ದೆಯಾದ ಮುಖ್ಯ ಕಾರ್ಯದರ್ಶಿಗಳಾಗಿ ನಿವೃತ್ತರಾದರೂ ತಮ್ಮ ತಂದೆ ವಿ.ಕೃ. ಗೋಕಾಕರಂತೆ ಮೃದು ಸ್ವಭಾವ ಸರಳತೆಗಳನ್ನು ಮೈಗೂಡಿಸಿಕೊಂಡವರು ಎಂದರು; ಅಧಿಕಾರ ಮದ ಎಂದೂ ಅವರಿಗೆ ಆವರಿಸಿದ್ದಿಲ್ಲ ಎಂದರು.

ಡಾ. ನರಹಳ್ಳಿ ಬಾಲಸುಬ್ರಹ್ಮಣ್ಯ ಅವರು ತಮ್ಮ ಭಾಷಣದಲ್ಲಿ ಚಡಗರು ತಮ್ಮನ್ನು ಹೊಗಳಿಕೆಯ ಹೊನ್ನಶೂಲಕ್ಕೊಡ್ಡಿ ಸಭಾಸದರ ನಿರೀಕ್ಷೆಯನ್ನು ಎತ್ತರಕ್ಕೆ ಏರಿಸಿರುವುದಾಗಿ ಹೇಳುತ್ತಾ ತಾವು ಇಂದಿನ ಭಾಷಣಕ್ಕೆ ಒಪ್ಪಿರುವುದರಿಂದ ವಿ.ಕೃ. ಗೋಕಾಕರನ್ನು ಮತ್ತೊಮ್ಮೆ

ಓದಲು ತನಗೊಂದು ಅವಕಾಶವಾಯಿತು ಎಂದರು. ಡಾ. ಗೋಕಾಕರನ್ನು ತಮ್ಮ ವಿದ್ಯಾರ್ಥಿ ದೆಸೆಯಿಂದ ಗಮನಿಸಿ ಅವರ ಸರಳ ಗಾಂಭೀರ್ಯದ ಭಾಷಣ ಕೇಳಿದಂದಿನಿಂದ ಅವರ ಸಾಹಿತ್ಯ ಮತ್ತು ಸಂಸ್ಕೃತಿಯ ಬಗ್ಗೆ ಗೌರವ ಹೊಂದಿದ್ದರೂ ತಮ್ಮ ಕಾರ್ಯ ಗೌರವದಿಂದ ಅವರ ಸಾಹಿತ್ಯದ ಆಳವಾದ ಅಧ್ಯಯನ ಮಾಡಲು ಸಾಧ್ಯವಾಗಲಿಲ್ಲ ಎಂದರು.

1934 ರಿಂದಲೇ ಡಾ. ಗೋಕಾಕರು ಬರೆದು ಪ್ರಾರಂಭಿಸಿದ್ದ 'ಕಲೋಪಾಸಕ' ಕೃತಿಯು ಅವರು ನವೋದಯ ಸಾಹಿತ್ಯದ ಪ್ರವರ್ತಕರು ಎಂಬುದನ್ನು ಸಿದ್ಧಪಡಿಸಿತೆಂದರು. ಮುಂದುವರೆದು ಅವರು ಮಾಡಿದ ಭಾಷಣದ ಸಾರಾಂಶ ಹೀಗಿದೆ.

"1970-75ರಲ್ಲಿ ಅಡಿಗರು ನವ್ಯ ಸಾಹಿತ್ಯದ ಪ್ರವರ್ತಕರೆಂಬ ವಾದ ಎದ್ದಿದ್ದರೂ, 1950 ರಿಂದಲೇ ನವ್ಯತೆ, ಅತಿನವ್ಯ, ಉಪನವ್ಯ ಮುಂತಾದ ಅನೇಕ ಪ್ರಬೇಧಗಳು ಬಂದಿವೆ. ನವ್ಯ ಸಾಹಿತ್ಯ ರೂಪಿಸಿಕೊಳ್ಳುವ ಭರದಲ್ಲಿ ಒಬ್ಬರನ್ನೊಬ್ಬರು ಟೀಕಿಸುವ ಪ್ರವೃತ್ತಿ ಬೆಳೆದಿದೆ. ಈಗ ಪೂರ್ವಾಗ್ರಹ ಬಿಡಬೇಕು, ಆರೋಗ್ಯಕರವಾದ ನವ್ಯ ಸಾಹಿತ್ಯ ಬೆಳೆಯಬೇಕು. ಡಾ॥ ಗೋಕಾಕರು ಪ್ರಾರಂಭಿಸಿದ್ದ ನವೋದಯ ಉದಯದ ಕಾಲದ ಮುಕ್ತ ಛಂದಸ್ಸು, ಅಂತಹ ಸಾಹಿತ್ಯ ಸೃಷ್ಟಿಯಲ್ಲಿ ಮಾದರಿಯಾಗಿತ್ತು. ಅವರು ಸಂಕೀರ್ಣತೆಯ ಉಪಾಸಕರು, ಅವರ ಪಯಣದ ಪ್ರೀತಿ, ಮತ್ತು ಪ್ರವಾಸಗಳು ಕನ್ನಡಿಗರಿಗೆ ಹೊಸ ಅನುಭವ ಪ್ರಪಂಚದ ಬಾಗಿಲನ್ನು ತೆರೆದುವು. ಪೂರ್ವ ಪಶ್ಚಿಮದ ಸಮ್ಮಿಲನದ ಹೊಸ ಸಾಧ್ಯತೆಯ ಅರಿವಾಯಿತು. 1940ರ ಅವರ ಸಮುದ್ರಗೀತೆಗಳಲ್ಲಿ ಅವರ ಅನುಭವಗಳು ಪ್ರಕಟವಾಗಿವೆ.

1950ರ ಮುಂಬೈ ಸಮ್ಮೇಳನದಲ್ಲಿ ಅವರು ನವ್ಯ ಸಾಹಿತ್ಯದ ಉದ್ಘೋಷವೆನ್ನುವಂತೆ ನವ್ಯ ಸಾಹಿತ್ಯದ ನಾನಾ ಪ್ರಕಾರಗಳನ್ನು ವಿವರಿಸಿದರು. ಅದರ ಮೂರು ಮುಖ್ಯ ಗುಣಗಳು ಪ್ರಯೋಗಶೀಲ ಪ್ರತಿಭೆ, ಹೊಸದನ್ನು ಅನ್ವೇಷಿಸುವುದು ಮತ್ತು ನಿರಂತರ ಪ್ರಯೋಗಗಳೆಂದು ಸ್ಪಷ್ಟಪಡಿಸಿದರು".

ಮುಂದೆ ಮಾತನಾಡುತ್ತ ಡಾ॥ ನರಹಳ್ಳಿ ಬಾಲಸುಬ್ರಹ್ಮಣ್ಯರವರು ಪ್ರಾಸ್ತಾವಿಕವಾಗಿ ಕನಕದಾಸರು ಅಕ್ಕಿ-ರಾಗಿಯ ಸಂವಾದವನ್ನು ರಾಮನ ಕಥೆಯಲ್ಲಿ ಸೇರಿಸಿರುವುದನ್ನು ವಿವರಿಸಿದಾಗ ಇಂತಹ ಪ್ರಯೋಗ ಹಿಂದೆಯೂ ಅನೇಕ ಸಾರಿ ಆಗಿದ್ದರೂ ಸಹಾ, ಜನರಲ್ಲಿ ಚಿಂತನ ಶಕ್ತಿ ಚಿಕಿತ್ಸಕ ಭಾವನೆ ಮೂಡಿಸದಿರುವುದು ಆಶ್ಚರ್ಯ ಎಂದರು. ವಿಶ್ವರಥ ವಿಶ್ವಾಮಿತ್ರರ ವಿಶ್ವಮಾನವ ದೃಷ್ಟಿ, ಪ್ರಯೋಗಶೀಲತೆಯನ್ನುಉದಾಹರಿಸಿದರು. ಈ ದಿಕ್ಕಿನಲ್ಲಿ ಅವರ ಮಹಾಕಾವ್ಯ 'ಭಾರತ ಸಿಂಧು ದರ್ಶನ' ಒಂದು ಹೊಸ ಹೊಳಪು ತೋರಿಸುತ್ತದೆ ಎಂದರು.

''ಸಾಹಿತ್ಯ ಕೃತಿಗಳ ಸಮಗ್ರ ಪುನರಧ್ಯಯನ ಈ ದಿನದ ಅವಶ್ಯಕತೆ. ಅಧ್ಯಯನ, ಸಾಹಿತ್ಯ ಚಟುವಟಿಕೆ, ಸಮ್ಮೇಳನಗಳು ಕೇವಲ RITUAL ಆಗುತ್ತಿರುವುದು ಶೋಚನೀಯ. ಹೀಗಾಗದೇ ಇವುಗಳು ಕೇವಲ ಪ್ರಚಾರ ಸಾಧನಗಳಾಗದೇ ಸಮಗ್ರ ಸಾಹಿತ್ಯಗಳನ್ನು ಅದರ ರಚನೆಯ ಕಾಲದ ಸನ್ನಿವೇಶ ಮತ್ತೆ ಈಗಿನ ಸಂದರ್ಭದಲ್ಲಿ ಪುನರಧ್ಯಯನ ಪುನರ್‌ಪರಿಶೀಲಿಸುವ ಅಗತ್ಯವಿದೆ'' ಎಂದು ತಮ್ಮ ವಿದ್ವತ್ಪೂರ್ಣವಾದ ಸಾಹಿತ್ಯ ಸಮೀಕ್ಷೆಯಲ್ಲಿ ಡಾ|| ಗೋಕಾಕರ ಮಹತ್ವದ ಪಾತ್ರವನ್ನು ವಿವರಿಸಿದರು.

ಅಧ್ಯಕ್ಷತೆ ವಹಿಸಿದ್ದ ಶ್ರೀ ಅನಿಲ್ ಗೋಕಾಕರು ತಮ್ಮ ಕನ್ನಡದ ಭಾಷಾ ಜ್ಞಾನ ಕಡಿಮೆ. ಭಾಷೆಯ ಸಂಪರ್ಕ ಕಡಿಮೆಯಾದದ್ದಕ್ಕೆ ಅವರ ವಿದ್ಯಾಭ್ಯಾಸಕಾಲಕ್ಕೆ ತಂದೆಯವರು ಉದ್ಯೋಗವನ್ನು ಬೇರೆ ಬೇರೆ ರಾಜ್ಯಗಳಲ್ಲಿ ಮಾಡುತ್ತಿದ್ದು ತಮಗೆ ಮರಾಠಿ ಮತ್ತಿತರ ಭಾಷೆಗಳನ್ನು ಕಲಿಯಬೇಕಾದುದು ಅನಿವಾರ್ಯವೆಂದರು. ಆದರೂ ಕನ್ನಡದಲ್ಲೇ ತುಂಬಾ ರಸವತ್ತಾಗಿ ಮಾತನಾಡಿ ಅವರ ತಂದೆ ಮತ್ತು ಡಾ. ಶಿವರಾಮ ಕಾರಂತರ ಹಾಗೂ ಬೇಂದ್ರೆಯವರ ಸ್ನೇಹಸಂಬಂಧ ಧಾರವಾಡದ 'ಗೆಳೆಯರ ಬಳಗ' ಮತ್ತು ಅವರಿಗೆ ಮಹಾರಾಷ್ಟ್ರದ ಬಹುತೇಕ ಮಹನೀಯರಲ್ಲಿದ್ದ ಗೌರವ ಅವರ ಪಾಂಡಿತ್ಯ, ಸರ್ವಧರ್ಮಸಮಭಾವ ಮತ್ತೆ ಶಿಸ್ತು ಅದರ ಜೊತೆಗೆ ಎಲ್ಲರೊಂದಿಗೂ ತೋರಿಸುತಿದ್ದ ಮೃದು ನಡತೆಗಳನ್ನು ಉದಾಹರಣೆಗಳೊಂದಿಗೆ ಸಭಿಕರಿಗೆ ಮನದಟ್ಟು ಮಾಡಿಸಿದರು. ಅವರ Concept of Indian literature ಅದರಲ್ಲೂ ಇಂಗ್ಲೀಷ್‌ನ ಸಾಹಿತ್ಯದ ಬಗ್ಗೆ ಅವರಿಗಿದ್ದ ಪಾಂಡಿತ್ಯ ಮತ್ತು ನಮ್ಮ ಜನರಿಗಿರುವ ಇಂಗ್ಲೀಷ್ ಅಗತ್ಯ ಒತ್ತಿ ಹೇಳಿದರು.

ಶಿವರಾಮ ಕಾರಂತ ವೇದಿಕೆಯ ಅಧ್ಯಕ್ಷೆ ಶ್ರೀಮತಿ ಪ್ರೇಮಾ ಭಟ್ಟರು ಡಾ. ಗೋಕಾಕರು ತಮ್ಮ ಕಾದಂಬರಿ ಬಿಡುಗಡೆ ಮಾಡಿದ್ದನ್ನು ಮತ್ತು ತಮಗೆ ಉತ್ತೇಜನ ಕೊಟ್ಟದ್ದನ್ನು ನೆನಸಿಕೊಂಡರು. ಉಪಾಧ್ಯಕ್ಷೆ ಶ್ರೀಮತಿ ರಾಧಾರಾಮಸ್ವಾಮಿಯವರು ವಂದನಾರ್ಪಣೆ ಮಾಡಿದರು.

---

**ಕಾರಂತ ಉವಾಚ :**

ಜೀವನ ದಾರುಣವಾದುದು; ಅದು ಕಣ್ಣೀರಿನ ಸಂತೆ, ಅದನ್ನು ನೆಚ್ಚಿದವನಿಗೆ ಸುಖವಿಲ್ಲ – ಎಂಬ ತೀರ್ಮಾನ ನನಗಂತು ಒಪ್ಪಿಗೆಯಿಲ್ಲ. ಈ ಜೀವ ಕೋಟಿಯ ಜೀವವು ಅಷ್ಟು ಕೊಳೆ ಕಿಲುಬಗಳಿಂದ ತುಂಬಿರುವುದಾದರೆ ಅದು ಇಷ್ಟು ದಿನ ಉಳಿಯಲಾರದು.

**– ಶಿವರಾಮ ಕಾರಂತ**

'ಬಾಳ್ವೆಯೇ ಬೆಳಕು' ಕೃತಿಯಿಂದ

ಕವನ

## ಕಾರ್ಗಿಲ್ಲಿನಲ್ಲಿ – ನೀನೆಲ್ಲಿ ?

ಕತ್ತಲೆಯ ಮರೆಯಲ್ಲಿ
ಎತ್ತರದ ಶಿಲೆಯಲ್ಲಿ
ನೆತ್ತರಿನ ಹೊಳೆಯಲ್ಲಿ
ನಾ ನಿನ್ನ ಅರಸಲೆಲ್ಲಿ ?

ಗುಂಡಿನಾ ಮಳೆಯಲ್ಲಿ
ಗಡಿಯ ಆ ತುದಿಯಲ್ಲಿ
ಗುಡುಗಿನ ಗರ್ಜನೆಯಲ್ಲಿ
ನಾ ನಿನ್ನ ಅರಸಲೆಲ್ಲಿ ?

ಬೋಫರ್ಸ ಬೊಗಳುವಲ್ಲಿ
ಬಾನು ಬೆಂಕಿ ಉಗುಳುವಲ್ಲಿ
ಬರ್ಫ ಕರಗಿ ಕೆಂಪಾಗುವಲ್ಲಿ
ನಾ ನಿನ್ನ ಅರಸಲೆಲ್ಲಿ ?

ಗುರುತಿಸಿದ ಗಡಿ ಇರುವದೆಲ್ಲಿ
ನಂಬಿದಾ ನೆರೆ ಹೋಯಿತೆಲ್ಲಿ
ಮೈತ್ರಿಯ ಮೇರೆ ಕಳೆಯಿತೆಲ್ಲಿ
ನಿನ್ನ ನಾ ಅರಸಲೆಲ್ಲಿ ?

ಬಟಾಲಕ್ಕು ಕಾರ್ಗಿಲ್ಲು
ಜಮ್ಮು ಕಾಶ್ಮೀರವೆಲ್ಲ
ನೀ ನಡೆದ ನೆಲವಿದೆಲ್ಲ
ಕದನದ ಕಾಳ್ಗಿಚ್ಚಾಯಿತಲ್ಲ !

ಕದನದ ಕಾರ್ಮೋಡದಲ್ಲಿ
ಬೋಫರ್ಸನ ಬೊಂಬಾಟದಲ್ಲಿ
ಕಾರ್ಗಿಲ್ಲಿನಲ್ಲಿ, ಬಟಾಲಿಕ್ಕಿನಲ್ಲಿ
ನಿನ್ನ ನಾ ಅರಸಲೆಲ್ಲಿ ?

– ಬ್ರಿಗೇಡಿಯರ್ ಎಸ್.ಜಿ. ಭಾಗವತ (ನಿವೃತ್ತ)

# ಶಿವರಾಮ ಕಾರಂತ ವೇದಿಕೆಯ ಹುಟ್ಟು ಮತ್ತು ಬೆಳವಣಿಗೆ – ಒಂದು ನೆನಪು

## ಭಾಗ – 3

**ಪಾ. ಚಂದ್ರಶೇಖರ ಚಡಗ**

17-1-93ರಲ್ಲಿ ಉದ್ಘಾಟಿತವಾದ ನಮ್ಮ ಸಂಸ್ಥೆ ಅಖಿಲ ಕರ್ನಾಟಕ ವ್ಯಾಪ್ತಿಯಲ್ಲಿ ಕೆಲಸ ಮಾಡುವುದಿರಲಿ, ಬೆಂಗಳೂರಿನ ವಿವಿಧ ಬಡಾವಣೆಗಳ ಜನರು ನಮ್ಮ ಚಟುವಟಿಕೆಗಳಲ್ಲಿ ಭಾಗವಹಿಸುವಂತೆ ಮಾಡುವುದು ಕೂಡಾ ದುಸ್ತರವಾದಂತಹ ಪರಿಸ್ಥಿತಿ ಇಲ್ಲಿದೆ. ಪತ್ರಿಕಾ ಪ್ರಕಟಣೆ ಕೊಟ್ಟು ವೇದಿಕೆಯ ಸದಸ್ಯತ್ವಕ್ಕೆ ಅರ್ಜಿಗಳನ್ನು ಆಹ್ವಾನಿಸಿದೆನು. ಕೆಲವರು ವಿವರಗಳನ್ನು ಕೇಳಿ ಪತ್ರ ಬರೆದರೂ ವಿವರಗಳನ್ನು ಕಳುಹಿಸಿದಾಗ ಮತ್ತೆ ಅವರಿಂದ ಉತ್ತರವೇ ಇಲ್ಲ. ಒಬ್ಬಾಕೆ ನಾನು ಸೂರ್ಯನಾರಾಯಣ ಚಡಗರ ಮಗನಿರಬೇಕೆಂದು ಊಹಿಸಿ ಬಹಳ ಉತ್ಸಾಹದಿಂದ ಪತ್ರ ಬರೆದವಳು, ನಾನು ಅವರ ಮಗನಲ್ಲ, ಕುಟುಂಬಿಕನೆಂದು ಗೊತ್ತಾದ ಮೇಲೆ ವೇದಿಕೆಯ ಸದಸ್ಯಳಾಗಲು ಮನಸ್ಸು ಮಾಡಲೇ ಇಲ್ಲ. ವೇದಿಕೆಯ ಆರಂಭದಲ್ಲಿ ನಾವು ರೂ. 25 ಕೊಟ್ಟವರನ್ನು ವಾರ್ಷಿಕ ಸದಸ್ಯರಾಗಿಯೂ, ರೂ. 250 ಕೊಟ್ಟವರನ್ನು ಆಜೀವ ಸದಸ್ಯರಾಗಿಯೂ ಪರಿಗಣಿಸಿದೆವು. ರೂ. 1000 ಕೊಟ್ಟವರನ್ನು ದಾನಿ ಸದಸ್ಯರೆಂದು, ರೂ. 5000 ಕೊಟ್ಟವರನ್ನು ಪೋಷಕರೆಂದು ಕರೆದೆವು. ನನ್ನ ಮಿತ್ರ ರಾಮಸ್ವಾಮಿಯವರೊಬ್ಬರು ಮಾತ್ರ ಪೋಷಕರಾದರು. ಅವರೀಗ ಇಲ್ಲ. ಆದರೆ ಅವರ ನೆರವನ್ನು ನಾನು ಸ್ಮರಿಸಲೇಬೇಕು.

ಹುಬ್ಬಳ್ಳಿಯವರೊಬ್ಬರು ವಾರ್ಷಿಕ ಚಂದಾ ರೂ. 25/- ನ್ನು ಎಂ.ಓ. ಮೂಲಕ ಕಳುಹಿಸಿದ್ದರು. ವಾರ್ಷಿಕ ಸದಸ್ಯರಾದವರಲ್ಲಿ ಕೆಲವರು ಮುಂದೆ ಆಜೀವ ಸದಸ್ಯರಾದರು. ಬಹಳಷ್ಟು ಮಂದಿ ತಮ್ಮ ಸದಸ್ಯತ್ವವನ್ನು ಊರ್ಜಿತಗೊಳಿಸಲೇ ಇಲ್ಲ. 1998ರ ಮಾರ್ಚ್ 31ರ ವರೆಗೂ ಶಿವರಾಮ ಕಾರಂತ ವೇದಿಕೆಯು ಲಕ್ಷ್ಮೀನಾರಾಯಣ ಚಡಗ ಮೆಮೋರಿಯಲ್ ಚಾರಿಟೆಬಲ್ ಟ್ರಸ್ಟಿನ ಒಂದು ಪ್ರಮುಖ ಅಂಗ ಸಂಸ್ಥೆಯಾಗಿತ್ತು. ಮೇ 1993ರಲ್ಲಿ 'ಹಣತೆ' ಎಂಬ ಹೆಸರಿನ ಸ್ಮರಣ ಸಂಚಿಕೆಯನ್ನು ಟ್ರಸ್ಟಿನ ವತಿಯಿಂದ ಬಿಡುಗಡೆಗೊಳಿಸಲಾಯಿತು. ಮುಂದೆ ಆಕ್ಟೋಬರ 1993ರಲ್ಲಿ ಶಿವರಾಮ ಕಾರಂತರ ಹುಟ್ಟುಹಬ್ಬದ ದಿನ ದಿವಂಗತ ಶ್ರೀ ಸಿ.ಕೆ. ನಾಗರಾಜರಾಯರಿಂದ '**ಹಣತೆ**' ಎನ್ನುವ ತ್ರೈಮಾಸಿಕ ಉದ್ಘಾಟನೆ ಆಯಿತು. ಆಮಂತ್ರಣ ಪತ್ರಿಕೆಯಲ್ಲಿ ಅವರ ಹೆಸರಿನ ಹಿಂದೆ

'ಶ್ರೀ'ಸೇರಿಸದೇ ಹೋದಾಗ ಶ್ರೀ ಸಿ.ಕೆ. ನಾಗರಾಜರಾಯರು ...ವರ ಹೆಸರಿನ ಮುಂದೆ ಡಾ|| ಎಂದು ಅಚ್ಚು ಹಾಕಿದವರು ನನ್ನ ಹೆಸರಿನ ಹಿಂದೆ ಕನಿಷ್ಠ ... ಶ್ರೀ ಯಾದರೂ ಸೇರಿಸಬೇಕಿತ್ತು ಎಂದು ಚೇಷ್ಟೆ ಮಾಡಿದರು. ಕಣ್ತಪ್ಪಿನಿಂದ ಆದ ಪ್ರಮಾದಕ್ಕೆ ನಾನು ಕ್ಷಮೆ ಯಾಚಿಸಿದೆ.

ಶಿವರಾಮ ಕಾರಂತ ವೇದಿಕೆಯ ಸದಸ್ಯರಿಗೆ 31-3-98ರವರೆಗೂ ಯಾವುದೇ ಶುಲ್ಕವಿಲ್ಲದೆ ನಮ್ಮ ಟ್ರಸ್ಟಿನಿಂದ ನಡೆಸಲ್ಪಡುತ್ತಿದ್ದ ಗ್ರಂಥಾಲಯದ ಉಪಯೋಗಕ್ಕೂ ಅವಕಾಶ ಮಾಡಿಕೊಟ್ಟೆವು. ಹೀಗಿದ್ದರೂ ವೇದಿಕೆಯ ಸದಸ್ಯತ್ವದ ಸಂಖ್ಯೆ ಇನ್ನೂ ಇನ್ನೂರನ್ನೂ ದಾಟಿಲ್ಲ. ಇದಕ್ಕೆಲ್ಲಾ ಮುಖ್ಯ ಕಾರಣ ವೇದಿಕೆಯ ಕೆಲಸಗಳಿಗೆ ನನ್ನನ್ನು ಸಂಪೂರ್ಣವಾಗಿ ತೊಡಗಿಸಿಕೊಳ್ಳದೆ, ಸರಕಾರೀ ಕೆಲಸದಲ್ಲಿದ್ದು ಬಿಡುವಿನ ಮಧ್ಯೆ ಮಾತ್ರ ಸ್ವಲ್ಪ ಸಮಯವನ್ನು ವೇದಿಕೆಗಾಗಿ ಮೀಸಲಿಟ್ಟಿರುವುದೇ ಇರಬೇಕು. ಕಳೆದ ಹತ್ತು ವರ್ಷಗಳಿಂದ ನಾವು ನಡೆಸುತ್ತಾ ಬಂದಿರುವ ಕಾರ್ಯಕ್ರಮಗಳ ಬಗ್ಗೆ ಜನರಿಂದ ಮೆಚ್ಚುಗೆಯ ಮಾತುಗಳು ಕೇಳಿ ಬರುತ್ತಿದ್ದರೂ ಆರ್ಥಿಕವಾಗಿ ಈ ವೇದಿಕೆ ಸಶಕ್ತವಾಗಿಲ್ಲ.

1-4-98ರಲ್ಲಿ ವೇದಿಕೆಯನ್ನು ಟ್ರಸ್ಟಿನಿಂದ ಬೇರ್ಪಡಿಸಿದಾಗ ಟ್ರಸ್ಟಿಗೆ ರೂ. 51,680 ಗಳಷ್ಟು ಸಾಲ ಇತ್ತು. ಈ ಎಲ್ಲಾ ಸಾಲಗಳೂ ಶಿವರಾಮ ಕಾರಂತ ವೇದಿಕೆ ಆರಂಭಿಸಿದ ಪ್ರಕಾಶನ ಕಾರ್ಯದ ಸಲುವಾಗಿ ಮಾಡಿದ್ದು. ಆದರೂ ಈ ಸಾಲವನ್ನು ವೇದಿಕೆಗೆ ವರ್ಗಾಯಿಸದೆ ವೇದಿಕೆಗೆ ಮೂಲ ಬಂಡವಾಳವಾಗಿ 16,094 ರೂ. ಒದಗಿಸಿದೆವು. ಇದು ಆಜೀವ ಸದಸ್ಯತ್ವದ ಶುಲ್ಕದ ಹಣವೇ ಆಗಿತ್ತು. 31-3-98ರ ವರೆಗೆ ಮಾರಾಟವಾಗದೆ ಉಳಿದ ನಮ್ಮ ಪ್ರಕಟಣೆಗಳಿಂದ ಬಂದ ಹಣವನ್ನು ವೇದಿಕೆಯಲ್ಲಿಯೇ ಉಳಿಸಿಕೊಂಡು ಈಗ ವೇದಿಕೆಯಲ್ಲಿ ರೂ. 50,000 ಗಳಷ್ಟು ನಿರಖು ಠೇವಣಿ ಇದೆ. ಟ್ರಸ್ಟಿನ ಪಾಲಿನ ಸಾಲ ಮಾತ್ರ ಹಾಗೆಯೇ ಉಳಿದುಕೊಂಡಿದೆ. ಆದರೂ ಈ ವೇದಿಕೆಯ ಕಾರ್ಯಕ್ರಮಗಳು ಸಮಯಕ್ಕೆ ಸರಿಯಾಗಿ ಆರಂಭಿಸಲ್ಪಟ್ಟು ಅಚ್ಚುಕಟ್ಟಾಗಿ ನಡೆಯುತ್ತವೆ ಎನ್ನುವ ಮಾತು ಸಾಹಿತ್ಯಕ ವಲಯಗಳಲ್ಲಿ ಕೇಳಿ ಬರುತ್ತಿವೆ. ''ವೇದಿಕೆಯು ಅಚ್ಚುಕಟ್ಟಾದ ಕಾರ್ಯಕ್ರಮಗಳೊಂದಿಗೆ ರುಚಿರುಚಿಯಾಗಿ ತಿಂಡಿಗಳನ್ನು ಕೊಡುತ್ತದೆ'' ಎಂದು ಪ್ರೊ. ಜಿ. ವೆಂಕಟಸುಬ್ಬಯ್ಯನವರು ಹೇಳಿದ್ದು ನಮ್ಮ ದಶಮಾನೋತ್ಸವದ ಸಂದರ್ಭದಲ್ಲಿ 300ಕ್ಕೂ ಮಿಕ್ಕಿ ನೆರೆದಿದ್ದ ಸಾಹಿತ್ಯ ಪ್ರೇಮಿಗಳನ್ನು ಕಂಡೇ ಇರಬೇಕು. ಉಪಹಾರದ ವ್ಯವಸ್ಥೆ ವಿಶೇಷ ಸಂದರ್ಭಗಳಲ್ಲಿ – ಕಾರ್ಯಕ್ರಮ ದೀರ್ಘವಾಗಿದ್ದರೆ ಮಾತ್ರ. ಕೇವಲ ಒಂದೆರಡು ಘಂಟೆಗಳ ಮಾಸಿಕ ಕಾರ್ಯಕ್ರಮಗಳಲ್ಲಿ ಕಾಫಿಯ ವ್ಯವಸ್ಥೆಯೂ ಇರುವುದಿಲ್ಲ. ನಾವು ಪ್ರತಿ ತಿಂಗಳ ಕಾರ್ಯಕ್ರಮವನ್ನು ಸಮಯಕ್ಕೆ ಸರಿಯಾಗಿ

ಆರಂಭಿಸಿವುದಲ್ಲದೆ, ಕಾರ್ಯಕ್ರಮದಲ್ಲಿ ಒಬ್ಬರು ಅಥವಾ ಇಬ್ಬರು ಮುಖ್ಯ ಸಾಹಿತಿಗಳನ್ನು ಭಾಷಣಕಾರರಾಗಿ ಕರೆದು ಅವರಿಗೆ ಕನಿಷ್ಠ 45 ನಿಮಿಷಗಳಷ್ಟು ಕಾಲ ಮಾತನಾಡಲು ಹೇಳುತ್ತೇವೆ. ಆಮೇಲೆ ಸಭಾಸದರಿಂದ ಪ್ರಶ್ನೋತ್ತರಕ್ಕೆ 15 ನಿಮಿಷಗಳಷ್ಟು ಕಾಲಾವಕಾಶ ಇರುತ್ತದೆ. ಸಭಾಸದರು ತಮ್ಮ ಸಂದೇಹಗಳಿಗೆ ಭಾಷಣಕಾರರಿಂದ ಸೂಕ್ತ ಉತ್ತರ ಪಡೆದು ತೃಪ್ತರಾಗುವುದೇ ಹೆಚ್ಚು. ಪ್ರಶ್ನೆಗಾಗಿ ಪ್ರಶ್ನೆಗೆ ಅವಕಾಶ ಇರುವುದಿಲ್ಲ. ಸ್ವಾಮಿಜಿಗಳನ್ನೂ, ರಾಜಕಾರಣಿಗಳನ್ನೂ, ಸಾಹಿತಿಗಳನ್ನೂ ಒಂದೆಡೆ ಕಲೆ ಹಾಕಿ, ಕಾರ್ಯಕ್ರಮನ್ನು ತಡವಾಗಿ ಆರಂಭಿಸುವುದೇ ಈಗ ಫ್ಯಾಶನ್ ಆಗುತ್ತಿದೆ. ಸಮಯ ಪಾಲನೆಯ ಬಗ್ಗೆ ಶಿವರಾಮಕಾರಂತರಿಗೆ ಬಹಳ ಕಾಳಜಿ ಇತ್ತು. ಅವರು ತೋರಿಸಿದ ಪಥದಲ್ಲಿ ಮುನ್ನಡೆಯುವ ಬಯಕೆ ನಮ್ಮದು. ರಾಜಕಾರಣಿಗಳನ್ನು ಓಲೈಸಿ ಅವರ ಮೂಲಕ ಸರಕಾರದಿಂದ ನಾಲ್ಕು ಕಾಸು ಗಿಟ್ಟಿಸಿ ಕನ್ನಡ ಪರ "ಉಟ್ಟು ಓರಾಟಗಾರ" ಎನಿಸಿಕೊಳ್ಳುವ ಅಗತ್ಯ ನಮ್ಮಲ್ಲಿ ಯಾರಿಗೂ ಇಲ್ಲ. ನಮ್ಮದೇನಿದ್ದರೂ ಅಳಿಲ ಸೇವೆ. ಮೊದಲೇ ಕಾರಂತರು ಎಚ್ಚರಿಸಿದ್ದರು... "ಮಾಡುವ ಕೆಲಸದಲ್ಲಿ ಪ್ರಾಮಾಣಿಕತೆ ಇರಬೇಕು... ನಾನು ಮುಖ್ಯವಲ್ಲ, ಕೆಲಸ ಮುಖ್ಯ". ಈ ಹತ್ತು ವರ್ಷಗಳಲ್ಲಿ ಕಾರ್ಯಕ್ರಮಗಳು ನಿರಂತರವಾಗಿ ನಡೆಯುತ್ತಾ ಬಂದಿವೆ. ಆದರೆ ಒಮ್ಮೆ ಮಾತ್ರ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ಕೈಪು ಬಾಲಸುಬ್ರಹ್ಮಣ್ಯಂ ಅವರ ಸಂಗೀತ ಕಾರ್ಯಕ್ರಮವನ್ನು ಪ್ರಾಯೋಜಿಸಿದ್ದರು. ಇದು ಮುಮ್ಮಡಿ ಕೃಷ್ಣರಾಜ ಒಡೆಯರ ದ್ವಿಶತಮಾನೋತ್ಸವದ ಸಂದರ್ಭದಲ್ಲಿ. ಸರಕಾರದಿಂದ ಈವರೆಗೂ ನಾವು ಬೇಕಾದ ನೆರವು ಪಡೆದಿಲ್ಲ.

(ಮುಂದುವರಿಯುವುದು)

---

**ಗಗನಂ ಗಗನ ಸದೃಶಂ, ಸಾಗರಂ ಸಾಗರೋಪಮಂ**

ಹಾಗೆ

ಪೂಜ್ಯ ಕಾರಂತರೇ, ನಿಮಗೆ ನೀವೇ ಸದೃಶರು

ನಿಮಗೆ ನೀವೇ ಉಪಮೆ

ನೀವು ಇನ್ನೊಮ್ಮೆ ಹುಟ್ಟಿ ಬನ್ನಿ. ನಿಮ್ಮ ನಿರೀಕ್ಷೆಯಲ್ಲಿ,

– ನಿಮ್ಮ ಅನಂತ ಅಭಿಮಾನಿಗಳು

ಧಾರವಾಹಿ ಕಾದಂಬರಿ

# ಅಗ್ರಹಾರದಿಂದ ಅಮೇರಿಕಕ್ಕೆ

## (ಭಾಗ – 2)

– ಪಾ. ಚಂದ್ರಶೇಖರ ಚಡಗ

ದುಂದುಭಿ ನಾಮ ಸಂವತ್ಸರದ ವೈಶಾಖ ಮಾಸ ಶುಕ್ಲ ಅಷ್ಟಮಿಯಂದು ರಾತ್ರಿ 9 ಗಂಟೆಗೆ ಸಲ್ಲುವ ವೃಷಭ ಲಗ್ನದಲ್ಲಿ ಪಾಂಡವಾಡಿ ಕೃಷ್ಣ ಅಡಿಗರ ದ್ವಿತೀಯ ಪುತ್ರ ಲಕ್ಷ್ಮೀನಾರಾಯಣನಿಗೆ ಎಳ್ಳಂಪಳ್ಳಿ ಗ್ರಾಮದ ಬಡಾಗರಡಿ ಶಂಕರ ಉಡುಪರ ಮೊದಲ ಮಗಳು ಪದ್ಮಾವತಿಯನ್ನು ಕೊಟ್ಟು ಬಡಾಗರಡಿಯ ಹುಡುಗಿಯ ಮನೆಯಲ್ಲಿ ವಿವಾಹ ಮಹೋತ್ಸವವನ್ನು ನೆರವೇರಿಸಲಾಗುವುದು ಎಂದು ಗುರುಹಿರಿಯರು ನಿಶ್ಚಯಿಸಿದ್ದಾರೆ. ಈ ಶುಭ ಸಮಾರಂಭಕ್ಕೆ ತಾವು ನಾಲ್ಕು ದಿನ ಮುಂಚೆಯೇ ಬಂದು ನಮ್ಮೆಲ್ಲರ ಮನಸ್ಸನ್ನು ಸಂತೋಷಪಡಿಸಬೇಕೆಂಬ ಮದುವೆಯ ಕರೆಯನ್ನು ಬರಿಯ ಬಾಯಿ ಸಂದೇಶದಲ್ಲಿ ಉಡುಪಿ, ಕುಂದಾಪುರ ತಾಲ್ಲೂಕುಗಳ ಹತ್ತಾರು ಗ್ರಾಮಗಳಲ್ಲಿರುವ ನೆಂಟರಿಷ್ಟರಿಗೆಲ್ಲಾ ತಲುಪಿಸುವ ಹೊಣೆ ಇದೀಗ ಶಂಕರ ಉಡುಪರ ಅಣ್ಣ ಮಹಾಬಲ ಉಡುಪರ ಪಾಲಿಗೆ ಬಂದಿದೆ. ಮುಖ್ಯ ನೆಂಟರಿಷ್ಟರಿಗೆಲ್ಲಾ ಅವರೇ ಖುದ್ದಾಗಿ ಅಕ್ಷತೆಕಾಳನ್ನು ಕೊಟ್ಟು ಬಂದಿದ್ದಾರೆ. ಸೂರಾಲು, ಕೊಕ್ಕರ್ಣೆ, ಕಿರಾಡಿ, ಬ್ರಹ್ಮಾವರ, ಉಪ್ಪೂರು, ಸಾಲಿಗ್ರಾಮ, ಅಮವಾಸ್ಯೆಬೈಲು, ಕೋಟ, ಕೋಟೇಶ್ವರ ಹೀಗೆ ಹತ್ತಾರು ಊರುಗಳಿಗೆ ನಡೆದುಕೊಂಡೇ ಹೋಗಿ ಮದುವೆಯ ಆಮಂತ್ರಣವನ್ನು ಕೊಟ್ಟಿದ್ದಾರೆ. ಹಿರಿಯರಿಗೆಲ್ಲಾ ನಮಸ್ಕರಿಸಿ, ಅವರ ಆಶೀರ್ವಾದವನ್ನು ಬೇಡಿದ್ದಾರೆ.

ಮಹಾಬಲ ಉಡುಪರ ಹಿರಿಯರು ಅನಂತಶಯನಕ್ಕೆ ಅಂದರೆ ಇದೀಗ ತಿರುವನಂತಪುರವೆಂದು ಕರೆಯಲ್ಪಡುವ ಕೇರಳದ ರಾಜಧಾನಿಗೆ. ಕೆಲವು ಶತಮಾನಗಳ ಹಿಂದೆ ನಡೆದುಕೊಂಡೇ ಹೋದ ಸುಬ್ಬಣ್ಣ ಉಡುಪರು. ಮೊದಲು ಅನಂತಶಯನದಲ್ಲಿ ದೇವಳದ ಪರಿಚಾರಕ್ಕಾಗಿ ಸೇರಿದರೂ ಮುಂದೆ ತಮ್ಮ ಕಠಿಣ ಪರಿಶ್ರಮ, ಸಚ್ಚಾರಿತ್ರ್ಯ ಮತ್ತು ತಾವು ಮಾಡಿದ ವೇದಾಧ್ಯಯನಗಳಿಂದ ದೇವಸ್ಥಾನದ ಪೂಜೆಯ ಹಕ್ಕನ್ನೂ ಪಡೆದರಂತೆ. ಅಲ್ಲಿಯ ರಾಜನಿಂದ ಕೆಲವು ಎಕರೆ ಜಮೀನೂ ಅವರ ಪಾಲಿಗೆ ಬಂತಂತೆ. ಈಗಲೂ ಅವರ ವಂಶಜರಿಗೆ ತಿರುವನಂತಪುರದ ಸುತ್ತಲ ಹಳ್ಳಿಯಿಂದ ಗೇಣಿಯ ರೂಪದಲ್ಲಿ ನೂರಾರು ರೂಪಾಯಿ ಹಣ ಪ್ರತಿವರ್ಷ ಸಿಗುತ್ತದಂತೆ. ಇರಲಿ, ಮಹಾಬಲ

ಉಡುಪ ಮತ್ತು ಶಂಕರ ಉಡುಪರ ತಂದೆ ನಿಧನರಾದಾಗ, ಅವರು ತಮ್ಮ ಗಂಡು ಮಕ್ಕಳಿಗೆ 100 ಮುಡಿ ಭತ್ತದ ಗದ್ದೆಯನ್ನು ಬಿಟ್ಟು ಹೋಗಿದ್ದರು. ಅವರ ಭೂಮಿಯಲ್ಲಿ ಅರ್ಧಾಂಶ ಎಳ್ಳಂಪಳ್ಳಿ ಗ್ರಾಮದಲ್ಲೂ, ಇನ್ನೊಂದರ್ಧಾಂಶ ಕೊಂಚ ದೂರದ ಉಪ್ಪೂರಿನಲ್ಲೂ ಇತ್ತು. ಉಪ್ಪೂರಿನ ಜಮೀನನ್ನು ಇತ್ತೀಚೆಗೆ ಸಾಗುವಳಿ ಮಾಡಲು ಶಂಕರನಾರಾಯಣ ಮಧ್ಯಸ್ಥರಿಗೆ ಚಾಲಗೇಣಿಗೆ ಕೊಟ್ಟಿದ್ದರು.

ಮಹಾಬಲ ಉಡುಪರು ಬ್ರಹ್ಮಾವರದ ಐಗಳ ಮಠದಲ್ಲಿ ತಮ್ಮ ಕಂಚಿನ ಕಂಠದಿಂದ ಯಕ್ಷಗಾನ ಪ್ರಸಂಗಗಳನ್ನೂ, ಕುಮಾರ ವ್ಯಾಸ ಭಾರತವನ್ನೂ, ತೊರವೆಯ ರಾಮಾಯಣವನ್ನೂ ಮಕ್ಕಳಿಗೆ ಪಾಠ ಮಾಡಿ ಒಳ್ಳೆಯ ಶಿಕ್ಷಕರೆನಿಸಿಕೊಂಡಿದ್ದರು. ಆ ಕಾಲದಲ್ಲಿ ಐರೋಡಿ ಶಿವರಾಮಯ್ಯ, ಭಿರ್ತಿರಾಮಚಂದ್ರಶಾಸ್ತ್ರಿ, ಕುಪ್ಪಯ್ಯ ಚಡಗ ಮೊದಲಾದ ವಿದ್ವಾಂಸರೊಡನೆ ವಿಚಾರ ವಿನಿಮಯ ಮಾಡಿಕೊಳ್ಳುವ ಭಾಗ್ಯ ಅವರದಾಗಿತ್ತು. ಇಷ್ಟು ಮಾತ್ರವಲ್ಲದೆ, ಹತ್ತಾರು ಸಂಸ್ಕೃತ ಗ್ರಂಥಗಳನ್ನು ಓದಿಕೊಂಡು ಕಾಹಿಲೆ ಕಸಾಲೆಗಳಿಗೆ ಆಯುರ್ವೇದ ರೀತ್ಯಾ ಮನೆಮದ್ದನ್ನು ಬಂದವರಿಗೆಲ್ಲಾ ಪುಕ್ಕಟೆಯಾಗಿ ಹಂಚುತ್ತಿದ್ದರು. ಈ ಮದ್ದುಗಳನ್ನು ನಾನಾ ಗಿಡಗಳ ಬೇರು, ತೊಗಟೆ, ಕಾಂಡ ಎಲೆಗಳಿಂದ ಸ್ವತಹಾ ಅವರೇ ತಯಾರಿಸುತ್ತಿದ್ದರು. ಸಾಸ್ತಾನದ ಕೇಳು ಪಂಡಿತನಿಗಿಂತ ಇವರೇನೂ ಕಡಿಮೆ ಇರಲಿಲ್ಲ ಎಂದು ಜನ ಆಡಿಕೊಳ್ಳುತ್ತಿದ್ದರು. ಅರಸಿನ ಮುಂಡಿಗೆ ಅಥವಾ ಕಾಮಾಲೆ (Jaundice) ಕಾಹಿಲೆಗೆ ಮದ್ದು ಕೊಡುವುದರಲ್ಲಿ ಇವರದು ಎತ್ತಿದ ಕೈ. ಅದೇನು ಬೇರು ನಾರುಗಳನ್ನು ತೇದಿ ಆ ಪುಡಿಯನ್ನು ತಯಾರಿಸುತ್ತಿದ್ದರೋ ಆ ಗರಡಿ ಮನೆಯ ದುರ್ಗಾ ಪರಮೇಶ್ವರಿಯೇ ಬಲ್ಲಳು. ಒಂದೇ ವಾರದಲ್ಲಿ ಕಾಹಿಲೆ ಗುಣವಾಗುತ್ತಿತ್ತು. ತುಕ್ರ ಪೂಜಾರಿಯ ಒಂದು ಕೇಸು ಬಿಟ್ಟರೆ ಅವರು ಕೊಟ್ಟ ಔಷಧಿ ಫಲಕಾರಿಯಾಗದುದೇ ಇಲ್ಲ. ತುಕ್ರನಾದರೋ ಕುಡಿದು ಕುಡಿದು ಕಡ್ಡಿಯಾಗಿದ್ದ. ಅವನಿಗೆ ಕಾಮಾಲೆ ಕಾಹಿಲೆ ಬಂದಾಗ, ಮಹಾಬಲ ಉಡುಪರು ಬಹಳ ವಿಶ್ವಾಸದಿಂದಲೇ, ಎಂದಿನಂತೆ ತಾವು ತಯಾರಿಸಿದ ಪುಡಿಯನ್ನು, ದುರ್ಗಾಪರಮೇಶ್ವರಿಯ ಮೇಲೆ ಭಾರ ಹಾಕಿ ಕೊಟ್ಟಿದ್ದರು. ಆದರೆ ತುಕ್ರನ ಕಾಹಿಲೆ ಮಾತ್ರ ದಿನ ದಿನಕ್ಕೆ ಉಲ್ಬಣಗೊಳ್ಳುತ್ತಾ ಬಂದು ಕೊನೆಗೊಂದು ದಿನ ತುಕ್ರ ಈ ಪ್ರಪಂಚದಿಂದ ನಡೆದೇ ಬಿಟ್ಟ. ಗಂಡನ ಸಾವಿನ ಶೋಕದಿಂದ ರೋಧಿಸುತ್ತಿದ್ದ, ಇನ್ನೂ ತಾರುಣ್ಯದಲ್ಲಿದ್ದ ಹೆಂಡತಿ ಚೆಳ್ಳಿಗೆ ಮಹಾಬಲ ಉಡುಪರು ಸಮಾಧಾನ ಹೇಳಿದ್ದು ಹೀಗೆ :

"ಮಗೂ... ಮನುಷ್ಯನ ಆಯುಷ್ಯ ತೀರಿದ ಮೇಲೆ ಯಾವ ಔಷಧಿಯೂ ಫಲ ನೀಡದು. ಹುಟ್ಟಿಸಿದವ ಕೊಂಡು ಹೋಗುತ್ತಾನೆ. ಅಂದರೆ, 'ಬೇಡ ... ಹಾಗೆ

ಮಾಡಬೇಡ, ನನ್ನ ಹೆಂಡತಿ ಮಕ್ಕಳು ಗತಿಹೀನರಾಗುತ್ತಾರೆ.' ಎಂದು ತಡೆಯಲು ಸಾಧ್ಯವೇ? ವೈದ್ಯರೇನು ಬ್ರಹ್ಮನೇ? ಬ್ರಹ್ಮ ಹಣೆಯಲ್ಲಿ ಬರೆದ ಲಿಪಿಯನ್ನು ಓದಲು ಯಾರಿಂದಲೂ ಆಗದು.'

ಮಹಾಬಲ ಉಡುಪರ ತಮ್ಮ ಶಿವರಾಮ ಮನೆಯಲ್ಲಿಯೇ ಇದ್ದು ಗದ್ದೆ ಬೇಸಾಯ ಸ್ವಲ್ಪ ಮಟ್ಟಿಗೆ ನೋಡಿಕೊಳ್ಳುತ್ತಿದ್ದ. ಎಳ್ಳಂಪಳ್ಳಿ ಗ್ರಾಮದ ಜಮೀನಿನಲ್ಲಿ ಮುಖ್ಯವಾಗಿ ಭತ್ತ ಕಬ್ಬು, ಮೆಣಸುಗಳನ್ನು ಬೆಳೆಯುತ್ತಿದ್ದರು. ಬಸವ, ಶೀನ ಮುಂತಾದ ನಿಷ್ಠೆಯಿಂದ ದುಡಿಯುವ ಕೂಲಿಗಳು ಒಡೆಯರ ಜಮೀನನ್ನು ತಮ್ಮ ಜಮೀನಿನಷ್ಟೇ ಪ್ರೀತಿಸಿ, ಅವರು ಕೊಟ್ಟ ಕೊಚ್ಚನ್ನು ಪಡೆದು ಅವರಿಗೆ ಬೇಸಾಯದಲ್ಲಿ ನಷ್ಟವಾಗದಂತೆ ನೋಡಿಕೊಂಡಿದ್ದರು. ಆಗಿನ್ನೂ ಒಕ್ಕಲು ಮಸೂದೆ (ಭೂ ಸುಧಾರಣೆ ಕಾಯಿದೆ)ಯ ಕಲ್ಪನೆ ಯಾರಿಗೂ ಬಂದಿರಲಿಕ್ಕಿಲ್ಲ.

'ಉಳುವವನೇ ಹೊಲದೊಡೆಯ' ಎನ್ನುವಂತಹ ಕ್ರಾಂತಿಕಾರೀ ವಿಚಾರಗಳು ಕರ್ನಾಟಕದಲ್ಲಿ ಪ್ರಚಾರಕ್ಕೆ ಬರುವ ಸುಮಾರು 60 ವರ್ಷಗಳ ಹಿಂದಿನ ಕತೆ ಇದು. ವಿಕ್ಟೋರಿಯಾ ಮಹಾರಾಣಿಯವರ ಘನವೆತ್ತ ಸರಕಾರದಲ್ಲಿ ಊರಿನಲ್ಲಿ ಸುಭಿಕ್ಷೆ ಇತ್ತು. ಎಲ್ಲೆಲ್ಲೂ ಕಳ್ಳತನ, ದರೋಡೆಗಳ ಮಾತೇ ಇಲ್ಲ. ಚಂಬಲ ಕಣಿವೆಯಲ್ಲಿ ಅಡಗಿದ್ದು ಕಾಡಿಗೆ ನಡೆದುಕೊಂಡೇ ಹೋಗುವವರ ಮೇಲೆರಗುತ್ತಿದ್ದ ಪ್ರಯಾಣಿಕರನ್ನು ಲೂಟಿ ಮಾಡುತ್ತಿದ್ದ ದರೋಡೆಕೋರ ಪಿಂಡಾರಿಗಳ ಹುಟ್ಟಡಗಿಸಿದ್ದ ಕಂಪನಿ ಸರಕಾರದಿಂದ 1857ರಲ್ಲಿ ವಿಕ್ಟೋರಿಯಾ ಮಹಾರಾಣಿಯವರು ಸ್ವತಹಾ ಅಧಿಕಾರವನ್ನು ಕೈಗೆತ್ತಿಕೊಂಡರು. ಲಾರ್ಡ್ ಮೆಕಾಲೇ ಆದೇಶದಂತೆ ಅಲ್ಲಲ್ಲಿ ಇಂಗ್ಲೀಷ್ ವಿದ್ಯಾಭ್ಯಾಸವನ್ನು ನೀಡಲು ಶಾಲೆಗಳು ಆರಂಭವಾದವು. ಜರ್ಮನ್ ಮಿಶನರಿಗಳು ಈ ದಿಸೆಯಲ್ಲಿ ಕಾರ್ಯ ಪ್ರವೃತ್ತರಾದರು. ಬ್ರಹ್ಮಾವರದ ಸೀರಿಯನ್ ಕ್ರಿಶ್ಚಿಯನ್ ಶಾಲೆ, ಸಾಸ್ತಾನದ ರೋಮನ್ ಕ್ರಿಶ್ಚಿಯನ್ ಶಾಲೆ, ಉಡುಪಿಯ ಕ್ರಿಶ್ಚಿಯನ್ ಹೈಸ್ಕೂಲು, ಮಂಗಳೂರಿನ ಅಲೋಶಿಯಸ್ ಹೈಸ್ಕೂಲು, ಹೀಗೆ ಜಿಲ್ಲೆಯಾದ್ಯಂತ ಅವರು ಕಟ್ಟಿದ ವಿದ್ಯಾಸಂಸ್ಥೆಗಳು ಪಡುವಣದ ಗಾಳಿ ಭಾರತಕ್ಕೆ ಬೀಸಿದಾಗ, ಮೊದಲು ಪಡು ಕರಾವಳಿಗೂ ಸೋಕುವಂತೆ ಮಾಡಿದವು. ಧರ್ಮ ಪ್ರಚಾರದೊಂದಿಗೇ ಕನ್ನಡ ಭಾಷೆಗೂ ಮಹತ್ವವನ್ನು ತಂದುಕೊಟ್ಟವರು ಈ ಮಿಶನರಿಗಳು. ಕನ್ನಡದ ಮೊದಲ ನಿಘಂಟಿನ ರಚನೆಗೆ ರೆವರೆಂಡ್ ಫಾದರ್ ಕಿಟ್ಟೆಲರು ಪಟ್ಟಶ್ರಮ ಈಗ ಕೆಲವರಿಗಾದರೂ ತಿಳಿದಿದೆ. ಈ ''ಇಂಗ್ಲಿಷ್'' ಶಾಲೆಗಳಲ್ಲಿ ಇಂಗ್ಲಿಷ್‌ನೊಂದಿಗೆ ಕನ್ನಡಕ್ಕೂ ಸಮಾನ ಸ್ಥಾನವಿತ್ತು. ಈಗಿನ ಕಾನ್ವೆಂಟುಗಳಂತೆ ಅಲ್ಲ. ಇಂಗ್ಲಿಷ್ ವಿದ್ಯಾಭ್ಯಾಸ ಕಲಿತವರಿಗೆ ಬ್ರಿಟಿಷ್ ಸರಕಾರದಲ್ಲಿ ಕೆಲಸ ದೊರಕುತ್ತಿತ್ತು. ಐಗಳ

ಮಠದ ಕೋದಂಡ ಮಣೆಯ ಶಿಕ್ಷೆಯೂ ಮಕ್ಕಳಿಗೆ ತಪ್ಪುತ್ತಿತ್ತು. ಹೀಗಾಗಿ ಇಂಗ್ಲಿಷ್ ವಿದ್ಯಾಭ್ಯಾಸವು ದಿನೇ ದಿನೇ ಜನಪ್ರಿಯವಾಗಿ ಒಂದೊಂದೇ ಐಗಳ ಮಠ (ಕೂಲಿಮಠ ಎಂದು ಇದನ್ನು ಘಟ್ಟದ ಮೇಲೆ ಕರೆಯುತ್ತಿದ್ದರು) ಮುಚ್ಚುತ್ತಾ ಬಂದವು. ಐಗಳೆಂದರೆ ಐಯ್ಯಗಳು. "ಅಯ್ಯ" ಶಬ್ದ "ಆರ್ಯ" ಶಬ್ದದ ತದ್ಭವ. ಇದಕ್ಕೆ ತಂದೆ ಎಂಬ ಅರ್ಥವೂ ಇದೆ. ಮಕ್ಕಳಿಗೆ ಮೊದಲ ಗುರು ತಂದೆಯಲ್ಲವೇ? ಮಗನಿಗೆ ಗಾಯತ್ರಿ ಉಪದೇಶ ಮಾಡುವುದು ತಂದೆಯ ಪಾಲಿನ ಕೆಲಸ ತಾನೇ. ಇಂತಹ ಶಾಲೆಗಳಲ್ಲಿ ಪಾಠ ಹೇಳುವವರು ಮಹಾಬಲ ಉಡುಪರಂತಹ ಬ್ರಾಹ್ಮಣರೇ. ಆದರೆ ಈ ಕೂಲಿಮಠ ಎನ್ನುವ ಶಬ್ದ ಹೇಗೆ ಬಂತೋ ನಾನರಿಯೆ. ಇರಲಿ, 50 ವರ್ಷ ಪ್ರಾಯವಾಗುವಷ್ಟರಲ್ಲಿ, ಮಹಾಬಲ ಉಡುಪರ ಐಗಳ ಶಾಲೆಯೂ ಮುಚ್ಚಿತ್ತು. ಇದೀಗ ಅವರು ಸಂಪೂರ್ಣವಾಗಿ ತಮ್ಮನ್ನು ಆಯುರ್ವೇದ ವೈದ್ಯನಾಗಿ ಪರಿವರ್ತಿಸಿಕೊಂಡಿದ್ದರು. ಆದರೆ ತಾವು ಕೊಟ್ಟ ಔಷಧಗಳಿಗೆ - ಒಂದುನಾಲ್ಕು ತೆಂಗಿನ ಕಾಯಿಯೋ, ಒಂದೆರೆಡು ಸೌತೆಕಾಯಿ, ಇಲ್ಲ ಕುಂಬಳಕಾಯಿ ಅಥವಾ ಪಡುವಲ ಕಾಯಿಯೋ ಅವರ ಮನೆಯ ಹಿಂಬಾಗಿನ ಅಂಗಳಕ್ಕೆ ಬಂದು ಬಿದ್ದಿದ್ದಿರಬಹುದಾದರೂ, ಯಾವುದೇ ಹಣಕಾಸನ್ನು ಅವರು ಪಡೆದವರಲ್ಲ. ಕಲಿತ ವಿದ್ಯೆಯನ್ನು ಹಣಕ್ಕಾಗಿ ಮಾರುವುದು ಪಾಪ ಎನ್ನುವುದು ಅಂದಿನ ಅನೇಕರ ನಂಬುಗೆಯಾಗಿತ್ತು. ಅಂತೂ ಪಿತ್ರಾರ್ಜಿತ ಆಸ್ತಿಗೆ ಏನನ್ನೂ ಸೇರಿಸದೇ ಇದ್ದರೂ, ತಂದೆ ಸುಬ್ಬಣ್ಣ ಉಡುಪರ ಹೆಸರಿಗೆ ಏನೇನೂ ಕುಂದು ಬಾರದಂತೆ, ಜೀವಿಸಿದ ಹೆಗ್ಗಳಿಕೆ ಅವರದು. ಅವರ ಮೊದಲ ಹೆಂಡತಿ ಹೆಣ್ಣು ಮಗುವೊಂದನ್ನು ಹಡೆದು, ಬಾಣಂತನದಲ್ಲಿ ನಂಜುಮೀರಿ ಸತ್ತಿದ್ದಳು. ಎರಡನೆಯ ಹೆಂಡತಿ ಭೂದೇವಿಯಿಂದ ಅವರಿಗೆ ನಾಲ್ಕು ಜನ ಹೆಣ್ಣು ಮಕ್ಕಳು. ಇಂದಿರಾ, ಭವಾನಿ, ಸರಸ್ವತಿ ಮತ್ತು ಗಂಗಾ - ಅವರೆಲ್ಲಾ ತಮ್ಮ ಶಿವರಾಮ ಉಡುಪರ ಮೊದಲ ಮಗಳು ಪದ್ಮಾವತಿಗಿಂತ ವಯಸ್ಸಿನಲ್ಲಿ ಕಿರಿಯರೇ. ಹಿರಿಯ ಹೆಂಡತಿಯ ಮಗಳು ಲಲಿತೆಯನ್ನು ದೂರದ ಹೆಬ್ರಿಗೆ ಕೊಟ್ಟು ಮದುವೆ ಮಾಡಿದ್ದರು.

ತಮ್ಮ ಶಿವರಾಮು, ಅಣ್ಣ ಮಹಾಬಲ ಹಾಕಿದ ಗೆರೆಯನ್ನು ಎಂದೂ ದಾಟಲಾರ. ಅವನಿಗೆ ಸ್ವಂತ ವ್ಯಕ್ತಿತ್ವ ಎಂಬುದೇ ಇಲ್ಲ ಅಂದರೂ ಅನ್ನಬಹುದು. ಅವನಿಗೆ ಕೊಕ್ಕರ್ಣೆಯ ಶಿವರಾಮ ಭಟ್ಟರ ಮಗಳು ಭಾಗೀರಥಿಯಿಂದ ನಾಲ್ಕು ಮಕ್ಕಳು. ಪದ್ಮಾವತಿ, ನೇತ್ರಾವತಿ ಎನ್ನುವ ಎರಡು ಹೆಣ್ಣು ಮಕ್ಕಳು ಹುಟ್ಟಿದ ಮೇಲೆ ಅಪ್ಪಣ್ಣ, ಶ್ರೀಧರ ಎನ್ನುವ ಎರಡು ಗಂಡು ಮಕ್ಕಳು. ಪದ್ಮಾವತಿಯ ಬಾಯಿ ಬಲು ಜೋರು. ಗಂಡಿನಂತೆ ಜೋರು ಬಾಯಿ ಮಾಡಬಲ್ಲ ಈ ಹುಡುಗಿ ದೊಡ್ಡಪ್ಪನ ಐಗಳ ಮಠವಲ್ಲಿ ಒಂದನೇ ತರಗತಿ ಓದಿ, ಪಾಂಡವಾಡಿಯ ಕೃಷ್ಣ ಅಡಿಗರ ಮಗ ಲಕ್ಷ್ಮೀನಾರಾಯಣ ಅಡಿಗ

ಯಾನೆ ಲಚ್ಚಪ್ಪ ಜೋಯಿಸ ಎನ್ನುವ ವರನೊಂದಿಗೆ ವಿವಾಹದ ಯೋಗವನ್ನು ತನ್ನ ಎಂಟನೇ ವಯಸ್ಸಿನಲ್ಲೇ ಪಡೆದಳು, 'ಅಷ್ಟವರ್ಷೇತ್ ಭವೇತ್ ಕನ್ಯಾ ...' ಎಂಬ ಶಾಸ್ತ್ರೋಕ್ತಿಗೆ ಭಂಗವಾಗದಂತೆ. ಮಹಾಬಲ ಉಡುಪರೇ ತಮ್ಮ ತಮ್ಮನ ಮಗಳಿಗೆ ಪಾಂಡವಾಡಿಯ ಕೃಷ್ಣ ಅಡಿಗರ ಮಗನೊಂದಿಗೆ ಮದುವೆಯ ವ್ಯವಸ್ಥೆಯನ್ನು ಮಾಡಿದ್ದರು. ಲಚ್ಚಪ್ಪನಾಗ ಹದಿನೆಂಟರ ಹರೆಯದ ತರುಣ. ಅದಾಗಲೇ ಧೂಳಂಗಡಿಯಲ್ಲಿ ಸ್ಥಾಪಿತವಾಗಿದ್ದ ಬೋರ್ಡ್ ಹಾಯರ್ ಎಲಿಮೆಂಟರಿ ಶಾಲೆಯಲ್ಲಿ ನಾಲ್ಕನೆಯ ತರಗತಿಯವರೆಗೆ ಓದಿ ಮುಂದೆ ಬಾಳೇ ಕುದುರು ಮಠದಲ್ಲಿ ಒಂದಿಷ್ಟು ವೇದ ಓದಿದ್ದಲ್ಲದೆ. ಉಡುಪಿಯ ಸಂಸ್ಕೃತ ಪಾಠಶಾಲೆಯಲ್ಲೂ ಸಾಹಿತ್ಯ, ಜೋತಿಷ್ಯ ಓದಿದ್ದ. ಅಷ್ಟು ಸಾಲದೇ, ಒಮ್ಮೆ ಮನೆಯಿಂದ ಹೇಳದೆ, ಕೇಳದೆ ಓಡಿ ಹೋಗಿ ಕೇರಳದಲ್ಲಿ ಜ್ಯೋತಿಷ್ಯದ ಉಚ್ಚ ಶಿಕ್ಷಣವನ್ನು ಪಡೆದು ಊರಿಗೆ ಮರಳಿ ಬಂದು ತಮ್ಮ ನಿಖರವಾದ ಫಲ ಜ್ಯೋತಿಷ್ಯದಿಂದಾಗಿ ಲಚ್ಚಪ್ಪ ಜೋಯಿಸರೆಂದೇ ಕರೆಯಲ್ಪಡುತ್ತಿದ್ದರು. ಆರಡಿ ಎತ್ತರದ ಗೌರವರ್ಣದ ಸುಂದರ, ಸ್ಫುರದ್ರೂಪಿ ತರುಣ ಲಕ್ಷ್ಮೀನಾರಾಯಣ ಪದ್ಮಾವತಿಯನ್ನು ನೋಡಿ ಮದುವೆಗೆ ಒಪ್ಪಿದ್ದಲ್ಲ. ಅಪ್ಪ ಕೃಷ್ಣ ಅಡಿಗರು ಮಗನ ಜಾತಕದೊಂದಿಗೆ ಪದ್ಮಾವತಿಯ ಜಾತಕವನ್ನು ತಾಳೆ ನೋಡಿದಾಗ, 24 ಗುಣಗಳು ಬಂದವು. ಅದೂ ಅಲ್ಲದೆ ಉಡುಪರ ಮನೆತನ ತಮ್ಮ ಯೋಗ್ಯತೆಗೆ ತಕ್ಕುದೆಂದೂ ಕಂಡು ಬಂದಿತ್ತು. ಮೇಲಾಗಿ ಆ ಎರಡು ಮನೆತನದವರೂ ಉಡುಪಿ ತಾಲ್ಲೂಕಿನಲ್ಲಿ ವಾಸವಾಗಿರುವ ಸ್ಮಾರ್ತ ಸಂಪ್ರದಾಯಕ್ಕೆ ಸೇರಿದ ಬೆರಳೆಣಿಕೆಯಲ್ಲಿರುವ ಶಿವಳ್ಳಿ ಬ್ರಾಹ್ಮಣರ ಕುಟುಂಬಗಳಿಗೆ ಸೇರಿದವು. 'ಜಾನೆ-ಎಡ್ಡೆ' ಮಾತನಾಡುವ ತುಳು ಬ್ರಾಹ್ಮಣರು ಠಕ್ಕಿನವರೆಂದು' ಇವರ ಪಂಗಡ ಆಡಿಕೊಳ್ಳುತ್ತಿತ್ತು. ಇನ್ನು 'ಕೋಟಂತಾಕಳಿಗೂ' 'ಮಠಂತಾಕಳಿಗೂ', 'ಆಟಂತಾಕಳಿಗೂ' ಊಟ ಬಲ (ಜಾಸ್ತಿ) ಎನ್ನುವ ಅಪಖ್ಯಾತಿಯೂ ಇತ್ತು. ಹಾಗಾಗಿ ಇವರು ಕೋಟಂತಾಕಳೊಂದಿಗೆ ಸಂಬಂಧ ಬೆಳೆಸಲು ಹಿಂಜರಿಯುತ್ತಿದ್ದರು. ಮೂಬುಕಳ ಹೊಳೆಯ ಆಚೆ ಇರುವ ಪಾಂಡವಾಡಿಯು ಕೂಟ ಮಹಾ ಜಗತ್ತಿನ ಅಂಗವಾದರೂ ಅಡಿಗರು ಶಿವಳ್ಳಿ ಸಂಪ್ರದಾಯದವರು. ಕೂಟ ಮತಸ್ಥರಿಗೆ ಯಾವ ಗುರುಪೀಠವೂ ಇರಲಿಲ್ಲವಂತೆ. ಆದರೆ ಪಾಂಡವಾಡಿಯ ಅಡಿಗರಿಗೆ ಪಕ್ಕದ ಬಾಳೇ ಕುದುರು ಮಠವೇ ಗುರುಪೀಠ. ಅಲ್ಲಿಯ ಗುರುಗಳೂ ಸ್ಮಾರ್ತ ಶಿವಳ್ಳಿ ಸಂಪ್ರದಾಯಕ್ಕೆ ಸೇರಿದವರು 'ಜಗನ್ ಮಿಥ್ಯ, ಬ್ರಹ್ಮ ಸತ್ಯ' ಎಂದು ಹೇಳುತ್ತಾ, ಕೂಟದವರಂತೆ ಊಟಕ್ಕೆ ಕೂತರೆ ಕಡಿಗೆ ಪಲ್ಯ, ಉದ್ದಿನ ಹಿಟ್ಟಿನ ಗೊಜ್ಜನ್ನು ತಿನ್ನಲು ಇಷ್ಟ ಪಡುತ್ತಿದ್ದವರು. ಅಂತೂ ಜಾತಕ ಕೂಡಿ ಬಂದಾಗ ಎಂಟು ವರ್ಷದ ಪದ್ಮಾವತಿಯನ್ನು

ಹದಿನೆಂಟರ ಲಕ್ಷ್ಮೀ ನಾರಾಯಣನೊಂದಿಗೆ ಕೊಡುವುದೆಂದು ನಿಶ್ಚಿತವಾಯಿತು. ನಂಬುಗೆಗೆ ಕೇವಲ ಹತ್ತಾರು ಜನ ಎಳ್ಳಂಪಳ್ಳಿಗೆ ಹೋಗಿದ್ದರು. ಆಗ ಈಗಿನಂತೆ ವೀಡಿಯೋ ಬಿಡಿ, ಫೋಟೋಗ್ರಾಫಿ ಕೂಡಾ ಇದ್ದಿಲ್ಲ. ಎಂಗೇಜ್‌ಮೆಂಟ್ ಎಂಬ ಸಂಭ್ರಮದ ಸಮಾರಂಭ ಅಂದಿನವರಿಗೆ ಅರಿಯದು. ಸೂರ್ಯ ಕಂತುವ ಸಮಯ, ಗಂಡಿನ ಕಡೆಯ ಹತ್ತಾರು ಜನ ಎಳ್ಳಂಪಳ್ಳಿಗೆ ಹೋದರು. ಅಲ್ಲಿಗೆ ಹೋಗಲು ಎರಡು ಹೊಳೆಗಳನ್ನು ದಾಟಬೇಕಿತ್ತು. ಸೀತಾನದಿಯನ್ನು ಸೂಲಕುದುರು ಮತ್ತು ಎಳ್ಳಂಪಳ್ಳಿಗಳಲ್ಲಿ ದೋಣಿಯ ಮೂಲಕ ದಾಟಬೇಕು. ಪಾಂಡವಾಡಿಯಿಂದ ಎಳ್ಳಂಪಳ್ಳಿಯವರೆಗೆ ದೋಣಿ ಪಯಣ ಮಾಡಬಹುದಿತ್ತು. ಆದರೆ ಇಳಿತದ ಸಮಯದಲ್ಲಿ ಸೀತಾನದಿಯಲ್ಲಿ ನೀರು ಕಡಿಮೆ. ಆಗ ದೋಣಿ ಉಸುಕಿನ ಮಧ್ಯೆ ಸಿಕ್ಕಿ ಬೀಳುವುದರಿಂದ ಮುಂದೆ ಹೋಗದು. ಅಂತೂ ಪೂರ್ತಿ ಕತ್ತಲು ಆವರಿಸುವ ಮುನ್ನ ಎಳ್ಳಂಪಳ್ಳಿಗೆ ಹೋದವರು ವಾಪಾಸು ಬರುವಾಗ ಚಂದ್ರ ಉದಯಿಸಿದ್ದ. ಆಗ ಸೀತಾನದಿಯಲ್ಲಿ ಭರತ. ಮಹಾಬಲ ಉಡುಪರು ಬಂದ ಅತಿಥಿಗಳನ್ನು ವಾಪಾಸು ಕಳಸಲು ಐತನ ದೋಣಿಯನ್ನು ಗೊತ್ತು ಮಾಡಿದ್ದರು. ಅವನು ಅವರ ಗೇಣಿಒಕ್ಕಲು ಕೂಡಾ ಆಗಿದ್ದ. ಹಾಗಾಗಿ ವಾಪಾಸು ಹೋಗುವಾಗ ಗಂಟೆ ಹತ್ತಾದರೂ ಯೋಚನೆ ಇರಲಿಲ್ಲ. ಆದರೆ ನಂಬುಗೆಯ ದಿನವಾಗಲಿ, ಅಲ್ಲಿಂದ ಹುಡುಗಿಯ ಕೊರಳಿಗೆ ಹುಡುಗ ಕರಿಮಣಿ ಬಿಗಿಯುವವರೆಗೂ ಅವರಾರೂ ಹುಡುಗಿಯ ಮನೆಯಲ್ಲಿ ಊಟ ಮಾಡುವುದು ಅಂದಿನ ಕಾಲದಲ್ಲಿ ನಿಷಿದ್ಧ. ಹಾಗಾಗಿ ಮಹಾಬಲ ಉಡುಪರು, ಅಕ್ಕಿ ಉಪ್ಪಿಟ್ಟು, ಹುಳಿ ಅವಲಕ್ಕಿ, ಹಲಸಿನಹಣ್ಣಿನ ಸೊಳೆ (ತೊಳೆ), ಮಾವಿನಹಣ್ಣು, ಜೀರಿಗೆ ಬಿಸಿ ನೀರುಗಳಿಂದ ಗಂಡಿನ ಕಡೆಯವರನ್ನು ಉಪಚರಿಸಿದ್ದರು. ಆ ಕಾಲದಲ್ಲಿ ಕನ್ನಡ ಜಿಲ್ಲೆಗಳಲ್ಲಿ ಹಾಲಿನ ಅಭಾವ ಬಹಳ. ಜೀರಿಗೆ ಬಿಸಿ ನೀರಿಗೆ ಬಣ್ಣ ಬಿಳಿ ಮಾಡುವಷ್ಟು ಮಾತ್ರ ಹಾಲು ಹಾಕುತ್ತಿದ್ದರು. ಆದರೆ ಉಡುಪರು ಮಾತ್ರ ಸ್ವಲ್ಪ ಧಾರಾಳವಾಗಿಯೇ ಹಾಲು ಹಾಕಿಸಿದ್ದರು. ಅದಕ್ಕೆ ಮೊದಲು, ಎರಡೂ ಕಡೆಯ ಪುರೋಹಿತರು ಗಣಪತಿಯ ಚಿತ್ರವನ್ನು ಜೇಡಿಪುಡಿಯಲ್ಲಿ ಬರೆದು, ಎದುರಿಟ್ಟ ಕಾಲುದೀಪದಿಂದ ಊದುಬತ್ತಿ ಹಚ್ಚಿ ಧೂಪದಾರತಿ ಮಾಡಿ, ಹಿತ್ತಾಳೆಯ ಏಕಾರತಿಯಿಂದ ಮತ್ತೊಂದು ಆರತಿ ಮಾಡಿ ಆಮೇಲೆ ಕುಟುಂಬದ ಹಿರಿಯರೊಬ್ಬರು, ಮೊದಲೇ ಕೈಗೊಂಡ ನಿರ್ಣಯವನ್ನು ಪ್ರಕಟಪಡಿಸಿದರು. ಆಗ ಆಮಂತ್ರಣ ಪತ್ರಿಕೆಯನ್ನು ಮುದ್ರಿಸುವ ಪದ್ಧತಿ ಇರಲಿಲ್ಲ. ಮಂಗಳೂರಿನಲ್ಲಿ ಒಂದೋ, ಎರಡೋ ಮುದ್ರಣಾಲಯಗಳು ಜರ್ಮನ್ ಮಿಶನರಿಗಳಿಂದ ಆರಂಭವಾಗಿದ್ದರೂ ಮದುವೆಗೆ ಬಾಯ್ದೆರೆಯಾಗಿಯೇ ನೆಂಟರಿಷ್ಟರನ್ನು ಆಮಂತ್ರಿಸುತ್ತಿದ್ದರು. ಹಾಗಾಗಿ ಈಗಿನಂತೆ

ಎಂಗೇಜ್‌ಮೆಂಟ್‌ನ ಕರಡು ಆಮಂತ್ರಣ ಪತ್ರಿಕೆ ಸಿದ್ಧಪಡಿಸಲಿಲ್ಲ. ಎರಡೂ ಕಡೆಯ ಪುರೋಹಿತರು ಕೈಯಲ್ಲಿ ಹಿಡಿದ ಪಂಚಾಂಗದಿಂದ ಗಂಡು ಹೆಣ್ಣುಗಳ ನಕ್ಷತ್ರದ ಆಧಾರದ ಮೇಲೆ ಮದುವೆಗೆ ಮುಹೂರ್ತ ನಿಶ್ಚಯ ಮಾಡಿದರು. ಎರಡೂ ಕುಟುಂಬದಲ್ಲಿ ಏನಾದರೂ, ಹೆರಿಗೆ ಅಥವಾ ಸಾವುಗಳಿಂದ ಅಮೆ ಅಥವಾ ಸೂತಕ ಬಂದರೂ ಮದುವೆ ಮುಹೂರ್ತ ಮುಂದೆ ಹೋದೀತೆ ವಿನಹಾ ಸಂಬಂಧ ಎಷ್ಟು ಮಾತ್ರಕ್ಕೂ ತಪ್ಪಬಾರದೆಂದು ನಿಶ್ಚಯಿಸಿದ ಮೇಲೆ, ಹುಡುಗನ ಕಡೆಯವರು ಒಂದು ನಾಲ್ಕಾರು ರೂಪಾಯಿ ಬೆಲೆಯ ಭರ್ಜರಿ ಸೀರೆ, ಕುಪ್ಪಸವನ್ನು ಹೆಣ್ಣಿಗೆ ಕೊಟ್ಟು, ಹುಡುಗಿ ಸೀರೆ ಉಟ್ಟು ಸಭೆಗೆ ಬಂದು ಎಲ್ಲ ಹಿರಿಯರಿಗೂ ವಂದಿಸಬೇಕೆಂದು ಹೇಳಿದರು. ಆದರೆ ಈ ಸಮಾರಂಭದಲ್ಲಿ ಮದುವೆಯ ಮಾಣಿಗೆ ಮಾತ್ರ ಪ್ರವೇಶ ನಿಷಿದ್ಧ. ಮದುವೆಯ ದಿನ ಗಂಡು ಹೆಣ್ಣಿಗೆ, ಹೆಣ್ಣು ಗಂಡಿಗೆ ಮಾಲೆ ಹಾಕಿದ ಮೇಲೆ ಅವರಿಬ್ಬರ ನಡುವೆ ಹಿಡಿದ ತೆರೆಯನ್ನು ದೂರ ಸರಿಸಿದಾಗಲೇ, ಗಂಡಿಗೆ ಹೆಣ್ಣಿನ ಮುಖ ನೋಡುವ ಯೋಗ ಲಭ್ಯವಾಗುತ್ತಿತ್ತು. ಲಚ್ಚಪ್ಪನ ವಿವಾಹವು ನಡೆದುದೂ ಹೀಗೆ, ಇಲ್ಲದಿದ್ದರೆ ಕಂದುಬಣ್ಣದ, ಐದು ಅಡಿ ಎತ್ತರದ ಪದ್ಮಾವತಿಯನ್ನು ಅವನು ಒಪ್ಪುತ್ತಿದ್ದನೋ ಇಲ್ಲವೋ.

ಮದುವೆ ನಾಲ್ಕು ದಿನಗಳದ್ದು. ಮೊದಲ ದಿನ ಮಧ್ಯಾಹ್ನ ಹೆಣ್ಣಿನ ಕಡೆಯವರಿಗೆ ಮಾತ್ರ ಮದುವೆಯ ಚಪ್ಪರದಲ್ಲಿ ನಾಂದಿಯ ಊಟ. ಚಪ್ಪರವನ್ನು ಮುಂಚಿನ ದಿನವೇ ಹಾಕಿದ್ದರು. ಅದಕ್ಕೊಂದು ಪಾಯಸ ಮಾಡಿದ್ದರು. ಅಂದು ಗಂಡಿನ ಕಡೆಯವರಿಗೆ ಗಂಡಿನ ಮನೆಯಲ್ಲಿ ಸಮಾವರ್ತನೆಯ ಊಟ. ಸಮಾವರ್ತನವೆಂದರೆ ಬ್ರಹ್ಮಚರ್ಯದ ಸಮಾಪ್ತಿಯ ಶಾಸ್ತ್ರೀಯ ಕರ್ಮಾಂಗ. ಮದುಮಗನು ಕಾಶಿಗೆ ಹೊರಟು ನಿಂತಾಗ ಅವರ ಸೋದರಮಾವ ಕೊಕ್ಕರ್ಣೆಯ ಶಿವರಾಮಭಟ್ಟರ ಮಗ ಕಿಟ್ಟಯ್ಯ ಭಟ್ಟರು ಸ್ವತಹಾ ಅವನನ್ನುತಡೆದು ನಿಲ್ಲಿಸಿದ್ದರು. ಅವನ ಕೈಯಲ್ಲಿದ್ದ ಓಲಿ ಕೊಡೆ, ಬಿದಿರಿನ ದಂಟು, ಕಾಲಲ್ಲಿದ್ದ ಅಡಿಕೆ ಹಾಳೆಯ ಮೆಟ್ಟು, ಮುಂದೆ ಮನೆಯ ಮೂಲೆಯೊಂದರಲ್ಲಿ ಹಳೆಗಾಲದ ನೆನಪನ್ನು ಸಾರುವ ವಸ್ತುವಾಗಿ ಕೆಲವು ಕಾಲ ಇದ್ದವು. ದಂಟುಕೋಲಂತೂ, ಮದುವೆಯ ದಿನ ಮದುಮಗನಿಗೆ ಅತ್ಯಂತ ಮುಖ್ಯವಾದ ವಸ್ತು. ಹಣೆಯಲ್ಲಿ ಬಾಸಿಂಗ, ತಲೆಯಲ್ಲಿ ಮುಂಡಾಸು, ಕೈಯಲ್ಲಿ ದಂಟುಕೋಲು, ಕುತ್ತಿಗೆಯಲ್ಲಿ ಜನಿವಾರ ಹೊಂದಿದ್ದ ಬ್ರಾಹ್ಮಣ ಯುವಕನ ಮುಖದಲ್ಲಿ ಒಂದು ವಿಶೇಷ ಕಳೆ. ಸ್ವತಃ ಶ್ರೀಮನ್ನಾರಾಯಣನೇ ಅವನು ಎನ್ನುವ ನಂಬಿಕೆ. ಅಖಂಡ ಬ್ರಹ್ಮಚರ್ಯ ಪಾಲನೆಯಿಂದಲೇ ಈ ಕಳೆ ಬರುತ್ತಿತ್ತಂತೆ. ವಧೂವರರು ಸಾಕ್ಷಾತ್ ಮಹಾಲಕ್ಷ್ಮೀ, ಶ್ರೀವಿಷ್ಣುವಿನ ಪ್ರತಿನಿಧಿಗಳಾಗಿ ಧರ್ಮಪಾಲನೆಗೆ ವಿವಾಹವೆಂಬ ಪವಿತ್ರ ಬಂಧನಕ್ಕೆ ಒಳಗಾಗಿ ಸಂತಾನಭಾಗ್ಯದ ಮೂಲಕ ಪಿತೃಗಳನ್ನು

''ಪುತ್'' ಎನ್ನುವ ನರಕದಿಂದ ತ್ರಾಯತೇ ಅಂದರೆ ಪಾರುಮಾಡುವ ಪುತ್ರರನ್ನು ಹಡೆದು, ಸಂಸಾರದಲ್ಲಿ ಧರ್ಮ, ಅರ್ಥ, ಕಾಮ, ಮೋಕ್ಷ ಎಂಬ ಚತುರ್ವಿಧ ಪುರುಷಾರ್ಥಗಳಿಗಾಗಿ ಬಾಳುವುದೇ ಅಂದಿನವರ ಜೀವನದ ಗುರಿಯಾಗಿರುತ್ತಿತ್ತು.

ನಾಂದಿ ಊಟಕ್ಕೆ ತೀರಾ ಹತ್ತಿರದ ಸಂಬಂಧಿಗಳಿಗೆ ಮಾತ್ರ ಆಮಂತ್ರಣ. ನಾಂದಿಯೆಂದರೆ ಶ್ರಾದ್ಧವಿದ್ದ ಹಾಗೆ. ಮುಂದೆ ಮಾಡುವ ಕಾರ್ಯದಲ್ಲಿ ಪಿತೃಗಳ ಆಶೀರ್ವಾದವನ್ನು ಪಡೆಯುವುದೇ ಅದರ ಉದ್ದೇಶ. ನಾಂದಿಯ ಊಟ ಮುಗಿಸಿ ಹೆಣ್ಣಿನ ಕಡೆಯವರು ರಾತ್ರಿ ಒಂಬತ್ತರ ಧಾರೆಯ ತಯಾರಿಯಲ್ಲಿದ್ದರೆ, ಗಂಡಿನ ಕಡೆಯವರಿಗೆ ದಿಬ್ಬಣ ತೆಗೆದುಕೊಂಡು ಹೆಣ್ಣಿನ ಮನೆಗೆ ಹೋಗುವ ಸಂಭ್ರಮ. ಎರಡು ಹೊಳೆಗಳನ್ನು ದಾಟಿ ಎಳ್ಳಂಪಳ್ಳಿ ಸೇರಲು ಐದಾರು ಗಂಟೆಗಳೇ ಬೇಕು. ಹಾಗಾಗಿ ಸಮಾವರ್ತನೆಯನ್ನು ಚುರುಕಾಗಿ - ಚುಟುಕಾಗಿ ಅಲ್ಲ - ಮಾಡಿ ಹದಿನೆರಡು ಗಂಟೆಗೆ ಬಾಳೆ ಎಲೆಯನ್ನು ಹರಡಿ ಒಂದು ಗಂಟೆಯ ಒಳಗೆ ಊಟ ಮುಗಿಸಿದ್ದರೂ ಅಡಿಗರ ಮನೆಯಿಂದ ಅರ್ಧ ಮೈಲು ದೂರದಲ್ಲಿ ಸೀತಾನದಿಯನ್ನು ಸೂಲಕುದುರು ಎಂದು ಕರೆಯಲ್ಪಡುವ ಕಡವಿನಲ್ಲಿ ದಾಟಬೇಕಿತ್ತು. ಈ ಕಡವಿನಲ್ಲಿ ದಾಟುವ ದೋಣಿ ಸೂಲ ಕುದುರಿಗೆ ಮಾತ್ರವಲ್ಲ, ಬೆಣ್ಣೆಕುದುರು, ಕುಮ್ರಗೋಡು, ಉಪ್ಪಿನ ಕೋಟೆಗಳಿಗೆ ಹೋಗುವ ಕಡವೂ ಆಗಿತ್ತು. ಉಪ್ಪಿನಕೋಟೆ, ಬ್ರಹ್ಮಾವರ, ನೀಲಾವರ ಮಾರ್ಗವಾಗಿ ಎಳ್ಳಂಪಳ್ಳಿಗೆ ನಡೆದುಹೋಗುವ ದಾರಿ ಬಳಸು ದಾರಿ. ಅಲ್ಲಿಂದ ಮುಂದೆ ಎಳ್ಳಂಪಳ್ಳಿಯಲ್ಲಿ ಇನ್ನೊಮ್ಮೆ ಸೀತಾನದಿಯ ಸಾಲೊಂದನ್ನು ದಾಟಿ ಮಹಾಬಲ ಉಡುಪರ ಮನೆಗೆ ಹೋಗಬೇಕು. ಸೀತಾನದಿ (ನಮ್ಮಲ್ಲಿ ಹೊಳೆ ಎಂದೇ ಹೇಳುತ್ತಾರೆ)ಯಲ್ಲಿಯೇ ಪ್ರಯಾಣ ಮಾಡಿ ಎಳ್ಳಂಪಳ್ಳಿಗೆ ಹೋಗುವದು ಸುಲಭ. ಆದರೆ ಇಳಿತ ಭರತಗಳ ಲೆಕ್ಕ ಹಿಡಿದು ನದಿಯಲ್ಲಿ ಭರತವಿದ್ದಾಗ ಮಾತ್ರ ಎಳ್ಳಂಪಳ್ಳಿಯವರೆಗೂ ದೋಣಿಯ ಪಯಣ ಸಾಧ್ಯ. ಸೀತಾನದಿ ಹೆಬ್ರಿಯ ಸಮೀಪ ಪಶ್ಚಿಮಘಟ್ಟದಲ್ಲಿ ಹುಟ್ಟಿ, ಹಂಗಾರಕಟ್ಟೆಯಲ್ಲಿ ಅರಬ್ಬಿ ಸಮುದ್ರವನ್ನು ಸೇರುತ್ತಿತ್ತು. ಪಾಂಡವಾಡಿಯಿಂದ ಎಳ್ಳಂಪಳ್ಳಿಗೆ ದೋಣಿಯಲ್ಲಿ ಐದೇ ಮೈಲು. ನಡೆದು ಹೋದರೆ ಎಂಟು ಮೈಲಾದರೂ ಆಗುತ್ತಿತ್ತು. ಆಗಿನ ಕಾಲದ ಜನ ನಡೆಯಲು ಹಿಂಜರಿಯುತ್ತಿರಲಿಲ್ಲ. ತೀರಾ ಮುದುಕರಿಗೆ ಮಾತ್ರ ಒಂದು ದೋಣಿಯ ವ್ಯವಸ್ಥೆ ಮಾಡಲಾಗಿತ್ತು. ಅವರೆಲ್ಲಾ ನದಿಯಲ್ಲಿ ಇಳಿತವಿದ್ದುದರಿಂದ, ದಿಬ್ಬಣದವರು ಮದುವೆಯ ಚಪ್ಪರಕ್ಕೆ ಬಂದಾದ ಒಂದು ಗಂಟೆಯ ಮೇಲೆ ಬಂದು ತಲುಪಿದರಂತೆ. ದಿಬ್ಬಣದಲ್ಲಿ, ಮದುವೆಯ ಗಂಡು - ನಮ್ಮ ಭಾಷೆಯಲ್ಲಿ - ಮದುಮಗನನ್ನೂ ಕಲಶ ಕನ್ನಡಿ ಹಿಡಿದ ಅವನ ಹದಿನಾರು ವರ್ಷದ ತಂಗಿ ಲಕ್ಷ್ಮಿಯನ್ನೂ, ಪಲ್ಲಕ್ಕಿಯಲ್ಲಿ ಹೊತ್ತ ಖಾರ್ವಿ ಜನಾಂಗದ

ವೆಂಕಪ್ಪ ಮತ್ತು ಸಿದ್ಧಣ್ಣ, ಗರ್ನಾಲುಗಳನ್ನು ಆಸ್ಫೋಟಿಸುತ್ತಿದ್ದ ಲಿಗೋರಿನಾಯ್ಕ, ಮಂಗಲವಾದ್ಯವನ್ನು ಊದುತ್ತಿದ್ದ ಗುಂಡುಮಿ ರಾಮಯ್ಯ ಸೇರಿಗಾರ, ಹೊರಿ ಅಕ್ಕಿ ಕುಕ್ಕೆ ಹೊತ್ತ ಸಾಲೇರ ಕೊರಗನನ್ನು ಬಿಟ್ಟರೆ ಉಳಿದವರೆಲ್ಲಾ ಅಡಿಗರ ಕುಟುಂಬಕ್ಕೆ ಸೇರಿದವರು, ಅಥವಾ ಅವರ ಹತ್ತಿರದ ನೆಂಟರಿಷ್ಟರು, ಊರಿನಲ್ಲಿರುವ ಏಕಮಾತ್ರ ಮಧ್ಯಸ್ಥರೂ ಬಂದಿದ್ದರಂತೆ. ಅವರು ದುಹಿತೃ ಹಕ್ಕಿನಿಂದ ವಿನಾಯಕ ದೇವರಪೂಜೆಯ ಹಕ್ಕನ್ನು ಪಡೆದವರು. ಅವರ ತಾಯಿಯ ತಂದೆಗೆ ಗಂಡು ಸಂತತಿ ಇಲ್ಲದೇ ಹೋದುದರಿಂದ ಹೆಣ್ಣು ಮಗಳೇ ಆಸ್ತಿಗೆ ಹಕ್ಕುದಾರಳಾದಳು. ಅದರೊಂದಿಗೆ ವರ್ಷದಲ್ಲಿ ಎರಡು ತಿಂಗಳ ಪೂಜೆಯಹಕ್ಕೂ ಶೀನ ಮಧ್ಯಸ್ಥರ ತಂದೆಗೆ ಬಂತಂತೆ. ಹೀಗಾಗಿ ಅಡಿಗರ ಮಧ್ಯೆ ಮಧ್ಯಸ್ಥರೂ ಆಗ್ರಹಾರದಲ್ಲಿ ಪ್ರತಿಷ್ಠಾಪಿತರಾದರಂತೆ. ಎರಡು ಗಂಟೆಗೇ ''ಯಾಫಲಿನೀಯರ್ಾ'' ಎಂಬ ಪ್ರಾರ್ಥನೆಯೊಂದಿಗೆ ಕುಟುಂಬದ ಯಜಮಾನ ಎರಡು ತೆಂಗಿನ ಕಾಯಿಗಳನ್ನು ಹಿತ್ತಾಳೆಯ ಹರಿವಾಣದಲ್ಲಿ ಇಟ್ಟು ಕೈ ಮುಗಿದಾದ ಮೇಲೆ ಎಲ್ಲರೂ ಅಡಿಗರ ಬಯಲಿನಿಂದ ಹೊಳೆಯ ಬದಿಗೆ ನಡೆದರು. ಅಲ್ಲಿದ್ದ ಕಡವಿನ ದೋಣಿಯನ್ನು ಹತ್ತೋಣವೆಂದರೆ ದೋಣಿ ಹೊಳೆಯ ಇನ್ನೊಂದು ಕಡೆ ಇತ್ತು. ''ಓ ಚಾಂಪಾ'' ಎಂದು ಅಂಬಿಗನನ್ನು ಗಟ್ಟಿಯಾಗಿ ಕೂಗಿ ಕರೆದದ್ದು ಚಾಂಪನಿಗೆ ಕೇಳಿ ಕೇವಲ ಒಬ್ಬನೇ ಪಯಣಿಗನನ್ನು ಹೊತ್ತ ಅವನ ದೋಣಿ ಹೊಳೆಯ ಈ ಬದಿಗೆ ಬಂತು. ಮದುವೆಗೆ ಹೊರಟವರನ್ನು ಹೊತ್ತು ಸಾಗಿಸಲು ಸಿದ್ಧವಾಯಿತು. ಅಷ್ಟರಲ್ಲಿ ಇನಾಸನಾಯ್ಕನ ದೋಣಿಯೂ ಬಂತು. ಅಂತೂ ಸಂಜೆ ಏಳರ ಒಳಗೆ ಎಳ್ಳಂಪಳ್ಳಿ ಸೇರಿದ ದಿಬ್ಬಣಿಗರನ್ನು ಸ್ವಾಗತಿಸಲು ದೊಡ್ಡದೊಂದು ಜನಸಂದಣಿಯೇ ನೆರೆದಿತ್ತು. ಹುಡುಗಿಯ ಒಬ್ಬ ಸೋದರಮಾವ ಕಿಟ್ಟಣ್ಣ ಭಟ್ಟರು ಮದುವೆ ಮನೆಯಲ್ಲಿ ಯಜಮಾನರಂತೆ ಓಡಾಡಿಕೊಂಡಿದ್ದರು. ಆದರೆ ಅವರ ತಮ್ಮ ಬೆಂಗಳೂರಿನಲ್ಲಿ ಹೋಟೇಲಿಟ್ಟಿದ್ದ ಪುಟ್ಟಣ್ಣ ಭಟ್ಟರು ಬರಲಿಲ್ಲ ಎನ್ನುವುದು ಶಿವರಾಮ ಉಡುಪರಿಗೆ ಕೊಂಚ ನಿರಾಸೆಯನ್ನು ತಂದಿತ್ತು. ಆ ದಿನ ಬೆಳಿಗ್ಗೆ ಬಂದ ಮನಿಯಾರ್ಡರಿನಿಂದಾಗಿ ತಮ್ಮ ಭಾವ ಮದುವೆಗೆ ಬಾರದೆ ಇರುವ ವಿಚಾರ ತಿಳಿದಿತ್ತು. ಕಿಟ್ಟಣ್ಣ ಭಟ್ಟರ ಗಂಟಲಿನ ದೊಡ್ಡ ದನಿ ಹೆಣ್ಣಿನ ಕಡೆಯಲ್ಲಿ ಪ್ರಮುಖವಾಗಿ ಕೇಳಿ ಬರುತ್ತಿತ್ತು.

ಗಂಡಿನ ಕಡೆಯಲ್ಲಿ ಕುಟುಂಬದ ಹಿರಿಯರಾದ ಸುಬ್ರಹ್ಮಣ್ಯ ಅಡಿಗರು, ಪಾಂಡವಾಡಿಯ ಪಟೇಲರೂ ಆಗಿದ್ದರು. ಅವರುಟ್ಟ ಸಿಲ್ಕಿನ ಧೋತ್ರ, ಹೊದೆದುಕೊಂಡಿದ್ದ ಸಿಲ್ಕಿನ ಶಲ್ಯ (ಅಥವಾ ಶಾಲು), ತಲೆಯ ಮೇಲೊಂದು ಮುಂಡಾಸು, ಹೆಗಲಿಗೊಂದು ಅಂಗವಸ್ತ್ರ, ಕೈಯಲ್ಲಿ ಐದೂ ಬೆರಳುಗಳಿಗೆ ಐದು

ಚಿನ್ನದುಂಗರ, ಕೊರಳಲ್ಲೊಂದು ಚಿನ್ನದ ಸರ, ಕಿವಿಗಳಲ್ಲಿ ಚಿನ್ನದ ವಂಟಿ ಇವೆಲ್ಲಾ ಅಡಿಗರು ದೊಡ್ಡ ಕುಳ ಎಂದು ಸಾರಿ ಹೇಳುತ್ತಿದ್ದವು. ಅವರ ತಮ್ಮ ಚಂದ್ರಶೇಖರ ಅಡಿಗರು ಬ್ರಹ್ಮಾವರ ಸಬ್ ರಿಜಿಸ್ಟ್ರಾರರ ಆಫೀಸಿನಲ್ಲಿ ದಸ್ತಾವೇಜು ಬರೆಯುವ ಕಾರಕೂನರಾಗಿದ್ದು ಜನರು ಅವರನ್ನು ಬರವಣಿಗೆ ಅಡಿಗ ಎಂದೇ ಗುರುತಿಸಿದ್ದರು. ದಿಬ್ಬಣವನ್ನು ಎದುರುಗೊಂಡು ಎರಡೂ ಕಡೆಯವರು ಒಬ್ಬರು ಇನ್ನೊಬ್ಬರ ಮೇಲೆ ಅರಳಿನ ವಿನಿಮಯ ಮಾಡಿಕೊಂಡದ್ದಾಯಿತು. ಸುಬ್ರಹ್ಮಣ್ಯ ಅಡಿಗರಿಗೂ, ಕೃಷ್ಣ ಅಡಿಗರಿಗೂ, ಅವರ ಮಗ, ಮದುಮಗ ಲಚ್ಚಪ್ಪನಿಗೂ ಎಲ್ಲಿಲ್ಲದ ಉಪಚಾರ. ಹುಡುಗನ ಕಾಲನ್ನು ಶಿವರಾಮ ಉಡುಪರು ತೊಳೆದು ಕೈ ಹಿಡಿದು ಮಂಟಪಕ್ಕೆ ಕೊಂಡೊಯ್ದರು. ಅಲ್ಲಿ ಶಾಸ್ತ್ರಪ್ರಕಾರ ನಂಬುಗೆ ನಡೆಯಿತು. ಹುಡುಗನಿಗೊಂದು ಸಿಲ್ಕಿನ ಪಂಚೆ, ಶಾಲು, ಕೈಗೊಂದು ಉಂಗುರ ಮಧುಪರ್ಕಕ್ಕೆ ಹಿತ್ತಾಳೆಯ ಚೆಂಬು, ಕವಳಿಗೆ - ಸೌಟುಗಳನ್ನು ಕೊಟ್ಟರು. ಆಗಿನ್ನೂ ಬೆಳ್ಳಿಯ ಮಧುಪರ್ಕ ಕೊಡುವ ಪದ್ಧತಿ ಮಧ್ಯಮವರ್ಗದಲ್ಲಿ ಬಂದಿರಲಿಲ್ಲ.

ಕಾಶ್ಯಪಾವತ್ಸಾರ .... ಶ್ರೀಧರ ರೂಪಾಯ ರಾಮಚಂದ್ರ ಶರ್ಮಣಸ್ಯ ಪೌತ್ರಾಯ, ಕೃಷ್ಣಶರ್ಮಣಸ್ಯಪುತ್ರಾಯ'' ಎಂಬ ಮಂತ್ರಘೋಷಗಳೊಂದಿಗೆ ಲಕ್ಷ್ಮೀನಾರಾಯಣಶರ್ಮನು ಸ್ವತಃ ವಿಷ್ಣುರೂಪನಾಗಿದ್ದು, ವಿಶ್ವಾಮಿತ್ರ ಗೋತ್ರದ ಶಿವರಾಮ ಉಡುಪರ ಮಗಳು ಲಕ್ಷ್ಮೀ ಸ್ವರೂಪಳಾದ ಪದ್ಮಾವತಿ ಯಾನೆ ಪದ್ದುವನ್ನು ವರಿಸುವುದನ್ನು ಯಾವುದೇ ಧ್ವನಿವರ್ಧಕಗಳ ನೆರವು ಇಲ್ಲದೆ ಭರ್ತಿ ರಾಮಚಂದ್ರ ಶಾಸ್ತ್ರಿಗಳೂ, ಉಪ್ಪೂರು ರಾಮಣ್ಣ ಮಧ್ಯಸ್ಥರೂ ಹೇಳಿದ್ದನ್ನು ಮೊನ್ನೆ ಮೊನ್ನೆಯವರೆಗೆ ಹುಡುಗನ ತಾಯಿ ನಾಗಮ್ಮ ಸ್ಮರಿಸಿಕೊಳ್ಳುತ್ತಿದ್ದರು. ಪಾಂಡವಾಡಿಯ ಇತಿಹಾಸದಲ್ಲಿ ನಾಗಮ್ಮ, ಅವರ ಸೊಸೆ ಪದ್ದಕ್ಕ, ಇನ್ನು ಪುಟ್ಟತ್ತೆ, ಕಮ್ಮತ್ತೆ, ನರಸಿಂಹ ಅಡಿಗ, ಸುಬ್ರಾಯ ಅಡಿಗ, ಮಂಜಪ್ಪ ಅಡಿಗ, ಪದ್ಮನಾಭ ಅಡಿಗ, ಪಟೇಲ್ ಸುಬ್ರಹ್ಮಣ್ಯ ಅಡಿಗ, ಒಬ್ಬೊಬ್ಬರು - ಒಂದೊಂದು ಕಾದಂಬರಿಗೆ ವಸ್ತುವಾಗುವಷ್ಟು ವೈವಿಧ್ಯಪೂರ್ಣ ವ್ಯಕ್ತಿತ್ವ ಉಳ್ಳವರು. ನನ್ನದಂತೂ ಕಥಾನಾಯಕನೇ ಇಲ್ಲದ ವಿಚಿತ್ರ ಕಥೆ. ಇಲ್ಲಿ ಬಂದು ಹೋಗುವವರು ಹಲವರಾದರೂ ನಿಮ್ಮ ಮನಸ್ಸಿನಲ್ಲಿ ಗಟ್ಟಿಯಾಗಿ ನಿಲ್ಲುವವರು ಎಷ್ಟು ಜನರೋ ಕಾಣೆ. ಇರಲಿ, ''ಪ್ರಣೇಮಹೇ ವೃಣೆದ್ವಂಗಳ'' ನಂತರ ಮದುಮಗಳನ್ನು ಮದುವೆ ಮಂಟಪಕ್ಕೆ ಎತ್ತಿಕೊಂಡು ಬಂದವರು ಅವಳ ಸೋದರಮಾವ ಕಿಟ್ಟಣ್ಣ ಭಟ್ಟರು. ಎಂಟು ವರ್ಷದ ಬಾಲೆಯನ್ನು ಹೊರುವುದೇನು ಮಹಾ? ಕಿಟ್ಟಣ್ಣಭಟ್ಟರು ಒಂದು ಅಕ್ಕಿ ಮುಡಿಯನ್ನು

# ಲಕ್ಷ್ಮೀನಾರಾಯಣ ಚಡಗ
# ಮೆಮೋರಿಯಲ್ ಚಾರಿಟೆಬಲ್ ಟ್ರಸ್ಟ್ (ರಿ)

'ಆದರ್ಶ', ನಂ. 307, 17ನೇ ಅಡ್ಡ ರಸ್ತೆ,
2ನೇ ವಿಭಾಗ, ರವೀಂದ್ರನಾಥ ಟಾಗೋರ್ ನಗರ,
ಬೆಂಗಳೂರು – 560 032.
ಫೋನ್ : 3336822 / 3336087 ಇ–ಮೇಲ್ : pcchadaga@hotmail.com

## ಮೂರು ಅಮೋಘ ನೃತ್ಯರೂಪಕಗಳು
## ಸಮೂಹ ಕಲಾವಿದರು, ಉಡುಪಿ ಇವರಿಂದ

| | | |
|---|---|---|
| ದಿನಾಂಕ | : | 08.09.2003 (ಸೋಮವಾರ) |
| ಸಮಯ | : | ಸಂಜೆ 5.00 ರಿಂದ |
| ಸ್ಥಳ | : | ರವೀಂದ್ರ ಕಲಾಕ್ಷೇತ್ರ, ಜೆ.ಸಿ. ರಸ್ತೆ, ಬೆಂಗಳೂರು – 560 002. |

## 'ಪಾಂಚಾಲಿ'

ಏಕವ್ಯಕ್ತಿ ಯಕ್ಷರೂಪಕದಲ್ಲಿ ಕುಮಾರಿ ಭ್ರಮರಿಯ
ಅತ್ಯದ್ಭುತ ಅಭಿನಯ

## "ಭೀಷ್ಮ ಸತ್ಯವ್ರತನಾದದ್ದು'

ರಚನೆ ಮತ್ತು ನಿರ್ದೇಶನ : **ಪ್ರೊ. ಉದ್ಯಾವರ ಮಾಧವ ಆಚಾರ್ಯ**
ಅಭಿನಯ : **ಪ್ರೊ. ಎಂ.ಎಲ್.ಸಾಮಗ**
ಭಾಗವತಿಕೆ ಮತ್ತು ವಾದನ ಹಿನ್ನೆಲೆ : **ಕೆ.ಜೆ.ಗಣೇಶ್, ಕೆ.ಜೆ.ಕೃಷ್ಣ ಮತ್ತು ಕೆ.ಜೆ. ಸುಧೀಂದ್ರ**

## 'ಶಬರಿ ಅಥವಾ ಪುಣ್ಯಲಹರಿ'

ಪಂಡಿತ ಕವಿ ಸೇಡಿಯಾಪು ಕೃಷ್ಣ ಭಟ್ ಅವರ
ಕಥನ ಕವನ ಆಧಾರಿತ ನೃತ್ಯರೂಪಕ
ಪಾತ್ರವರ್ಗ : ಕುಮಾರಿ ಭ್ರಮರಿ, ಜಯಕರ ಬೈಲೂರು,
ನಾರಾಯಣದಾಸ್, ಗುರುಪ್ರಸಾದ್

## ಸರ್ವರಿಗೂ ಸ್ವಾಗತ

**ಪಾ. ಚಂದ್ರಶೇಖರ ಚಡಗ**
**ಮ್ಯಾನೇಜಿಂಗ್ ಟ್ರಸ್ಟಿ**




ಶಬರಿ – ಭ್ರಮರಿ – ನೃತ್ಯ ಸಮೂಹದೊಂದಿಗೆ



ವೃದ್ಧೆ ಶಬರಿ ಶ್ರೀರಾಮ ಲಕ್ಷ್ಮಣರ ಸಾನ್ನಿಧ್ಯ
(ಕುಮಾರಿ ಭ್ರಮರಿ – ಶಬರಿಯಾಗಿ,
ಕುಮಾರಿ ಮಾನಸಿ –ರಾಮ, ಕುಮಾರಿ ಸ್ವಾತಿ –ಲಕ್ಷ್ಮಣ)



ನೃತ್ಯ ನಿರ್ದೇಶಕಿ ಕುಮಾರಿ ಭ್ರಮರಿ

ಆನಂದ ಎಂಬುದು ಕೆಲಸ ಮುಗಿದ ಮೇಲೆ ಬರುವ ತೃಪ್ತಿಯೂ ಹೌದು. ಕೆಲಸ ಮಾಡುತ್ತಿರುವಾಗ ಬರುವ ತನ್ಮಯತೆ, ಉತ್ಸಾಹಗಳೂ ಹೌದು.

**–ಡಾ. ಶಿವರಾಮಕಾರಂತರು**

ಮಾತು ಮುತ್ತಿನ ಹಾರದಂತಿರಬೇಕು.
ಮಾತು ಸ್ಫಟಿಕದ ಜಲದಂತಿರಬೇಕು.
ಮಾತು ಆಡಿದರೆ ನಮ್ಮ ಕೂಡಲಸಂಗಮದೇವನು
ಮೆಚ್ಚಿ ಅಹುದು ಅಹುದು ಎನ್ನಬೇಕು

**–ಬಸವಣ್ಣನವರು**

ಮಹಾನದಿಯನ್ನು ದಾಟುವುದು; ಮಹಾಪುರುಷರೊಡನೆ ಸೆಣೆಸಾಟ; ಮಹಾಜನರೊಡನೆ ವಿರೋಧ; ಇವನ್ನು ದೂರದಲ್ಲೆ ತೊರೆದುಬಿಡಬೇಕು.

ಬ್ರಾಹ್ಮೀ ಮುಹೂರ್ತದಲ್ಲಿ – ಅಂದರೆ ರಾತ್ರಿಯ ಕೊನೆಯ ಪ್ರಹರದಲ್ಲಿ ಎದ್ದು ಧರ್ಮಾರ್ಥಗಳ ಚಿಂತನೆ ಮಾಡಬೇಕು.

ನಿದ್ದೆ ಮಾಡದವ ಗೆದ್ದ; ನಿದ್ದೆ ಮಾಡಿದವ ಬಿದ್ದ;
ಬೇಗ ನಿದ್ದೆ, ಬೇಗ ಎದ್ದೆ. ಆರೋಗ್ಯ ಧನ ಬುದ್ಧಿ ಗೆದ್ದೆ;
ಒಳ್ಳೆಯ ಜನರಿಗೆ ತೊಂದರೆಯಾಗಬಾರದೆಂದು
ಕೆಟ್ಟಜನರಿಗೆ ದೇವರು ನಿದ್ದೆ ಕೊಡುತ್ತಾನೆ.

**ಸಂಗ್ರಹ:– ರಾಧಾಕೃಷ್ಣ ಪ್ರಭು**

ಹೊರಬಲ್ಲರು. ಹೊರುವ ಅಗತ್ಯ ಅವರಿಗಿಲ್ಲ ಎನ್ನುವುದು ಬೇರೆ ಮಾತು. ಅವರ ಮನೆಯ ತುಂಬಾ ಆಳುಕಾಳುಗಳು, ನೆಂಟರಿಷ್ಟರು. ಕೊಕ್ಕರ್ಣೆಯ ಅವರ ಮನೆ ಸುರಾಲು ಅರಮನೆಯಂತೆಯೇ ಇತ್ತು. ಕಿಟ್ಟಣ್ಣ ಭಟ್ಟರು ಧ್ವನಿ ಎತ್ತಿದರೆಂದರೆ ಎಲ್ಲರೂ ಗಪ್ ಚುಪ್. ಅವರು ಮದುವೆಯ ಮಂಟಪಕ್ಕೆ ಸೊಸೆಯನ್ನು ಹೊತ್ತು ತಂದು ಶಿವರಾಮ ಅಡಿಗರಿಂದ ನಾಲ್ಕು ರೂಪಾಯಿಗಳ (ಒಂದು ವರಹ) ಸಂಭಾವನೆಯನ್ನು ಪಡೆದು ಮದುವೆಯ ಚಪ್ಪರದಲ್ಲಿ ಆಸೀನರಾಗಿದ್ದರು - ದಿಂಬಿಗೆ ಒರಗಿ. ಆಗಂತೂ ಮದುವೆಯ ಚಪ್ಪರದಲ್ಲಿ ಕುರ್ಸಿಗಳು ಇರುತ್ತಿರಲಿಲ್ಲ. ಬಣ್ಣದ ಚಾಪೆಯ ಮೇಲೆಯೇ ಎಲ್ಲರೂ ಕುಳಿತು ಕೊಳ್ಳುವವರೆ. ಆಯುತಕಾರದ ಚಪ್ಪರದ ಮೂರು ಮೂಲೆಗಳಲ್ಲಿ ದಿಂಬಿಗೆ ಒರಗಿ ಕುಳಿತುಕೊಳ್ಳುವವರು ಪ್ರಮುಖರೆಂದೇ ಲೆಕ್ಕ. ಮಿಕ್ಕವರಿಗೆ ಆ ಭಾಗ್ಯ ಇಲ್ಲ. ಹಾಸಿದ ಮುಂಡುಕದ ಓಲಿಯ ಚಾಪೆಯ ಮೇಲೋ, ಜಮಖಾನೆಯ ಮೇಲೋ ಎಲ್ಲರೂ ಕುಳಿತುಕೊಳ್ಳಬೇಕಾಗಿತ್ತು. ನರಸಿಂಹ ಅಡಿಗರ ತಂದೆ, ಪದ್ಮನಾಭ ಅಡಿಗರಿಗೆ ವರ್ಷ ಐವತ್ತಾಗುವುದರಲ್ಲೇ ವಾತ ಕಾಡಲು ಆರಂಭಿಸಿತ್ತು. ಅವರು ಮಾಡಿದ ಪಾಪದ ಕೆಲಸಗಳಿಂದಲೇ ಹಾಗಾಗಿದೆ ಎಂದು ಮುಂದೆ ಪದ್ದಕ್ಕ ಹೇಳಿದ್ದನ್ನೂ ನಾನೇ ಕೇಳಿದ್ದೇನೆ. ಇರಲಿ , ಪದ್ಮನಾಭ ಅಡಿಗರಿಗೆ ಚಪ್ಪರದಲ್ಲಿ ಒಂದು ಬೋಗಿ ಮರದ ಮಂಚವನ್ನು ಒದಗಿಸಿದ್ದರು. ಎಲ್ಲರೂ ಕೃಷ್ಣ ಅಡಿಗರನ್ನೂ, ಮದುಮಗ ಲಕ್ಷ್ಮೀನಾರಾಯಣ ಅಡಿಗರನ್ನೂ, ಪಟೇಲ್ ಸುಬ್ರಹ್ಮಣ್ಯ ಅಡಿಗರನ್ನೂ ಉಪಚರಿಸುವವರೇ. ಮಾವಿನಹಣ್ಣನ್ನು ಹಿಂಡಿದ ಬೆಲ್ಲದ ಪಾನಕವನ್ನು ಕೈಗಿತ್ತು 'ಅಮೃತ ಪಾನಕ ಕುಡಿಯಿರಿ ಎಂದು ಒತ್ತಾಯವೇ ಒತ್ತಾಯ. ''ಇಲ್ಲ, ನಾನು ತಣ್ಣೀರಿನಿಂದ ಮಾಡಿದ ಪಾನಕವನ್ನು ಕುಡಿಯುವುದಿಲ್ಲ'' ಎಂದು ಕೃಷ್ಣ ಅಡಿಗರೆಂದಾಗ ಬಿಸಿ ನೀರಿನಿಂದ ಮಾಡಿದ ಪಾನಕ ಅವರ ಪಾಲಿಗೆ ಬಂತು. ಅಡಿಕೆ ಹಾಳೆಯಿಂದ ಮಾಡಿದ ಬೀಸಣಿಗೆಯಿಂದ ಗಾಳಿ ಬೀಸುವವರು ಹತ್ತಾರು ಜನ. 9 ಗಂಟೆಗೆ ಸರಿಯಾಗಿ ಧಾರೆ, ಆಮೇಲೆ ಮಂಗಳ ಸೂತ್ರಧಾರಣೆ, ಲಾಜಹೋಮ, ಸಪ್ತಪದಿ, ಆರತಿ ಅಕ್ಷತೆ ಮುಗಿದು ಊಟಕ್ಕೆ ಬಾಳೆಎಲೆ ಕೊಟ್ಟಾಗ 11 ಗಂಟೆ. ಆಗಲೇ ಚಿಕ್ಕ ಮಕ್ಕಳೆಲ್ಲಾ ನಿದ್ರಾಲೋಕದಲ್ಲಿದ್ದರು. ಮದುವೆ ಮುಗಿಸಿ ದಿಬ್ಬಣದವರೆಲ್ಲಾ ನದಿಯಲ್ಲಿ ಇಳಿತ ಆರಂಭವಾಗುವ ಮುನ್ನವೇ ಪಾಂಡವಾಡಿ ತಲುಪುವ ತರಾತುರಿಯಲ್ಲಿದ್ದರು. ಈ ಬಾರಿ ಮಹಾಬಲ ಉಡುಪರು ನಾಲ್ಕು ದೋಣಿಗಳಿಗೆ ವ್ಯವಸ್ಥೆ ಮಾಡಿದ್ದರು. ಆದರೂ ದೋಣಿಯಲ್ಲಿ ಸ್ಥಳ ಸಾಲದೆ ಕೆಲವು ಯುವಕರು ನಡೆದುಕೊಂಡೇ ಪಾಂಡವಾಡಿಗೆ ಹೊರಟರು.

ಮದುವೆಯ ಮರುದಿನ ಹುಡುಗಿಯನ್ನು ಪಾಂಡವಾಡಿಯ ಹುಡುಗನ ಮನೆ ತುಂಬಿಸುವ ಪ್ರಸ್ತ. ಹಾಗನ್ನಲು ಯಾರಿಗೆ ವ್ಯವಧಾನವಿದೆ? ಎಲ್ಲರ ಬಾಯಲ್ಲೂ ಅದು ಮಂತುಂಪ್ರಸ್ಥವೇ ಆಗಿತ್ತು. ಮನೆತುಂಬುವ ಪ್ರಸ್ತಕ್ಕೆ ಹೆಣ್ಣಿನ ಕಡೆಯವರಿಗೆ ಕೃಷ್ಣ ಅಡಿಗರು ಮದುವೆಯ ಚಪ್ಪರದಲ್ಲಿಯೇ ಅವರು ಊಟ ಮುಗಿಸಿ ವೀಳ್ಯದೆಲೆ ತಿನ್ನುವಾಗ ಆಮಂತ್ರಣ ಕೊಟ್ಟಿದ್ದರು. ತಮ್ಮವರಿಗೆಲ್ಲಾ ಮದುವೆಯ ಕರೆಯೊಂದಿಗೆ, ಈ ಪ್ರಸ್ತದೂಟಕ್ಕೂ ಕರಯನ್ನು ಕೊಟ್ಟಿದ್ದರು. ಬಾಳೇಕುದುರು ಮಠದಲ್ಲಿ ಪಾರುಪತ್ಯದಾರರಾಗಿದ್ದ ಕೃಷ್ಣ ಅಡಿಗರಿಗೆ ಲಕ್ಷ್ಮೀನಾರಾಯಣ ಒಬ್ಬನೇ ಮಗ. ಇನ್ನೊಬ್ಬ ಮಗ ಉಡುಪಿಯಲ್ಲಿ ಕಲಿಯುವಾಗ ಗಾಣಗುದ್ದಲೆ ಜ್ವರಬಂದು ಹದಿನಾರು ವರ್ಷದವನಿರುವಾಗಲೇ ತೀರಿಹೋದನಂತೆ. ಮಗಳು ಲಕ್ಷ್ಮೀ. ಲಕ್ಷ್ಮಿಯ ವಿವಾಹ ಬಾಳೇಕುದುರಿನ ರಾಮಚಂದ್ರ ಉಪಾಧ್ಯರೊಡನೆ ಆಗಿ ಅವಳಿಗೆ ಶಂಕರ ಮತ್ತು ವೆಂಕಟೇಶ, ಎಂಬ ಇಬ್ಬರು ಗಂಡು ಮಕ್ಕಳಿದ್ದರು. ಮಠದ ಪಾರುಪತ್ಯದಾರರೆಂದರೆ ಕೇಳಬೇಕೆ? ಕೃಷ್ಣ ಅಡಿಗರಿಗೆ ನಿಮ್ಮ ಮನೆ ತುಂಬುವ ಪ್ರಸ್ಥದ ಊಟ ಉಡುಪರ ಮದುವೆ ಊಟಕ್ಕಿಂತ ಒಂದು ತೂಕ ಹೆಚ್ಚಿಗೆ ಇರಬೇಕೆಂದು ಪಟೇಲ್ ಸುಬ್ರಹ್ಮಣ್ಯ ಅಡಿಗರ ಕುಮ್ಮಕ್ಕು. ಹಾಗಾಗಿ ಉಪ್ಪೂರಿನ ಗುಂಡುಮೇಲಂಟರಿಗೆ ಹೇಳಿ ಕಳಿಸಿದ್ದರು. ''ಗುಂಡಾ ... ವೈಶಾಖ ಮಾಸದ ಶುಕ್ಲ ಪಕ್ಷದ ನವಮಿಯಂದು ಒಂದು ಐನೂರು ಜನರಿಗೆ ಮಂತುಂ ಪ್ರಸ್ತ ಆಗಬೇಕು'' ಎಂದು ಶುರುಮಾಡಿ ಊಟಕ್ಕೆ ಎಂತೆಂತಹ ಪಲ್ಯ, ಹುಳಿ, ಮುದ್ದುಳಿ (ಮುದ್ದೆ ಹುಳಿ), ಗೊಜ್ಜು ಆಗಬೇಕೆಂದು ಹೇಳಿದ್ದರಲ್ಲದೆ, ಕಾಯಿ ಹೋಳಿಗೆ ಮತ್ತು ಅತ್ರಾಸ (ಅತಿ ರಸ) ಮಾಡುವಂತೆಯೂ ಸೂಚಿಸಿದ್ದರು. ನಾಲ್ಕು ಬಗೆಯ ಪಲ್ಯ, ಎರಡು ಬಗೆಯ ಹುಳಿ, ಮೇಲಾಗಿ ಪಳದ್ಯ, ಸಾಸಿವೆ, ತಂಬುಳಿಗಳ ಸುರಿಮಳೆ. ಆಗಿನ್ನೂ ಸಕ್ಕರೆಯ ಭಕ್ಷ್ಯಗಳು ಕನ್ನಡ ಜಿಲ್ಲೆಗಳಲ್ಲಿ ಕಾಲಿರಿಸಿರಲಿಲ್ಲ.

ಮೇಲಂಟರು ಕೃಷ್ಣ ಅಡಿಗರಿಗೆ ದೂರದ ನೆಂಟರು. ಅಡಿಗರು ಕೊಡುವ ಎರಡು ರೂಪಾಯಿ ಸಂಭಾವನೆಗೆಂದು ಕೆಲಸ ಮಾಡದೆ ಮೂಬುಕಳ ಹೋಳಿಯ ಆಚೆಯೂ ತನ್ನ ಖ್ಯಾತಿ ಹರಡಬೇಕು ಎನ್ನುವ ಏಕಮೇವ ಕಾರಣದಿಂದ ಬಹಳ ಮುತುವರ್ಜಿ ವಹಿಸಿ ಅಡಿಗೆ ಮಾಡಿದ್ದರು.

ಊಟಕ್ಕೆ ಜೀರಿಗೆ-ಮೆಂತೆ ತಂಬುಳಿ, ಅದರ ಹಿಂದೆ ಶುಂಠಿ ತಂಬುಳಿ, ಉರಗನ (ಒಂದೆಲಗ) ತಂಬುಳಿ, ಆಮೇಲೆ ಪಡುವಲಕಾಯಿ ಸಾಸಿವೆ, ತೊಂಡೆಕಾಯಿ ಮೊಸರು ಬಜ್ಜಿ, ಮೊದಲೇ ಬಡಿಸಿದ ಕಡಿಗೆ ಪಲ್ಯ, ಸುವರ್ಣಗಡ್ಡೆ ಪಲ್ಯಗಳೊಂದಿಗೇ ಜಿಟಿ ಪಿಟಿ

ಮಟ್ಟಿಗುಳ್ಳ ಮತ್ತು ಅಲಸಂಡೆ ಪಲ್ಯ. ಮಟ್ಟಿಗುಳ್ಳದ ಖ್ಯಾತಿ ಈಗ ಎಲ್ಲಾ ಕಡೆ ಹರಡಿದೆ. ಸ್ವತಹಾ ವಾದಿರಾಜಸ್ವಾಮಿಗಳಿಂದಲೇ ಪ್ರಸಿದ್ಧಿಗೆ ಬಂದ ಬದನೆಕಾಯಿಯ ಪರಿಭೇದ ಮಾತ್ರವಾದರೂ ಗುಳ್ಳದ ರುಚಿ ಬದನೆಗಿಲ್ಲ. ಮೇಲಂಟರು ಕತ್ತರಿಸಿದ ಗುಳ್ಳವನ್ನು ದೊಡ್ಡ ಬಾಣಲೆಯ ಅರ್ಧಭಾಗದಷ್ಟು ಎಣ್ಣೆ ಇಟ್ಟು ಹೋಳನ್ನು ಬಾಡಿಸಿ ಬೇಯಿಸಿದ್ದರು. ಅಬ್ಬಾ ಆ ಕೊಬ್ಬರಿ ಎಣ್ಣೆಯ ರುಚಿ ಏನು! ಇಷ್ಟಾದ ಮೇಲೆ ಬಿಸಿಯಾದ ಸಾರು, ಸಾರುಂಡವರ ಕೈಯಿಂದ ಸಾರಿನ ಪರಿಮಳ ಕೆಲವು ದಿನ ಅಡಗಲೇ ಇಲ್ಲವಂತೆ. (ಕರಾವಳಿ ತೀರದ ಊರುಗಳಲ್ಲಿ ಬೇಸಿಗೆಯಲ್ಲಿ ಅಡುಗೆ ಭಟ್ಟರ ಮೈಯಿಂದ ಸುರಿವ ಬೆವರೂ ಸಾರಿಗೆ ಸೇರಿರುತ್ತೋ ಏನೋ!) ಉಪ್ಪೂರು ಮೇಲಂಟರ ಅಡಿಗೆ ಮೂಬುಕಳ ಹೊಳೆಯ ಈಚೆಗೂ ಪ್ರಖ್ಯಾತವಾದದ್ದು ಈ ಮನೆ ತುಂಬುವ ಪ್ರಸ್ತದಿಂದಲೇ ಅಂತೆ. ತಮ್ಮ ನೆಂಟರ ಮನೆ ಅಡಿಗೆ ಎಂದು ಮೇಲಂಟರು ಬಹಳ ಮೆಹನತ್ತು ವಹಿಸಿ ದ್ದರಂತೆ. ಹಲಸಿನಹಣ್ಣು, ಮಾವಿನಹಣ್ಣು, ಕಡಲೆ ಬೇಳೆ ಮತ್ತು ಪರಡಿ ಪಾಯಸ ಒಂದಕ್ಕಿಂತ ಇನ್ನೊಂದು ರುಚಿಯಾಗಿದ್ದು ''ತನ್ನನ್ನೇ ತಿನ್ನಿ'' ಅನ್ನುತ್ತಿದ್ದುವಂತೆ. ಬ್ರಾಹ್ಮಣರ ಊಟ ಎರಡು ಪಂಕ್ತಿಗಳಲ್ಲಿ ಮುಗಿದ ಮೇಲೆಯೇ ಅವರ ಒಕ್ಕಲುಗಳು - ಅವರೆಲ್ಲಾ ಶೂದ್ರ ವರ್ಗಕ್ಕೆ ಸೇರಿದ್ದರೆಂದು ಬೇರೆ ಹೇಳಬೇಕಾಗಿಲ್ಲ - ಊಟ ಮಾಡಿ ಸುಸ್ತಾದರಂತೆ. ಸಾಲಾಗಿ ಒಂದೆಡೆಯಿಂದ ಶಿಸ್ತುಬದ್ಧವಾಗಿ ಉಪ್ಪು, ಉಪ್ಪಿನಕಾಯಿ, ಕೋಸಂಬರಿ, ಚಟ್ನಿ, ಪಲ್ಯ, ಚಿತ್ರಾನ್ನ ಹೀಗೆ ಕ್ರಮಬದ್ಧವಾಗಿ ಬಳಸುತ್ತಿದ್ದ ಅಡಿಗರ ಮಾಣಿಗಳ (ಹುಡುಗರ) ಚಾಕಚಾಕ್ಯತೆಗೆ ತಲೆದೂಗದವರೇ ಇಲ್ಲ.

ಮುದ್ದೆಹುಳಿ ಆದ ಮೇಲೆ ಮುಖ್ಯ ಹುಳಿ ಬರುತ್ತಿದ್ದಂತೆ, ಮದುವೆಯ ಚಪ್ಪರದಲ್ಲಿ ಕೋಲಾಹಲ. ಒಂದು ಕಡೆಯಿಂದ ಶಂಖ, ಜಾಗಟೆ, ಬಾರಿಸುತ್ತಾ ದಾಸರ ವೇಷಧಾರಿ ಬಂದು ಮಹಾಬಲ ಉಡುಪರಿಗೂ, ಶಿವರಾಮ ಉಡುಪರಿಗೂ ತರಕಾರಿ ಹಾರ ಹಾಕಿದರೆ, ಇನ್ನೊಂದು ಕಡೆ ನಾಗರ ಪಾತ್ರದ ವೇಷಧಾರಿಯೊಬ್ಬ ಸಿಂಗಾರದ ಹೂವಿನಿಂದ ಮುಖಕ್ಕೆಲ್ಲಾ ಬಡಿದುಕೊಂಡು ನಾಗ ನೃತ್ಯ ಮಾಡುತ್ತಿದ್ದ. ಊರ ಪಾತ್ರಿ ಬೋಳಪ್ಪಯ್ಯನವರೂ ಒಂದು ಗಳಿಗೆ ದಂಗಾಗುವಷ್ಟು ಚೆನ್ನಾಗಿ ನರ್ತಿಸುತ್ತಿದ್ದ. ಸಮಸ್ತ ಕುಟುಂಬಕ್ಕೂ ಸುಖವನ್ನು ಹಾರೈಸುತ್ತಿದ್ದ. ಬಾಯಿಗೆ ಉರಿವ ಬೆಂಕಿಯನ್ನು ಆಗಾಗ ಹೆಟ್ಟಿಕೊಳ್ಳುತ್ತಿದ್ದ. ಸ್ವತಹಾ ಕೃಷ್ಣ ಅಡಿಗರು ಅವನಿಗಿಂತ ವಯಸ್ಸಿನಲ್ಲಿ ಎಷ್ಟೋ ಹಿರಿಯನಾಗಿದ್ದರೂ, ಅವನಿಗೆ ಭಯ ಭಕ್ತಿಯಿಂದ ವಂದಿಸಿದ್ದರಂತೆ. ಪಾಯಸ ಬರುತ್ತಿದ್ದಂತೆ ನಾಗಪ್ಪಯ್ಯ ಅಡಿಗರು, ''ಪೂರ್ವಂ ರಾಮ ತಪೋವನಾನಿ'' ಎಂದು ಸಂಕ್ಷಿಪ್ತ

ರಾಮಾಯಾಣದ ಶ್ಲೋಕವನ್ನು ಹೇಳಿ ಅಂತ್ಯದಲ್ಲಿ ''ಭೋಜನ ಕಾಲೇ ಹರಹರಾ ಮಹಾದೇವಾ'' ಎಂದು ಕೂಗಿದಾಗ, ನೆರೆದವರೆಲ್ಲಾ ಅವರೊಡನೆ ಧ್ವನಿಗೂಡಿಸಿದ್ದರು. ಗಣಪತಿ ದೇವಸ್ಥಾನದ ಸುತ್ತಿನಲ್ಲಿರುವ ನಾಲ್ಕಾರು ಅಡಿಗರ ಮನೆಗಳಲ್ಲಿ ಬಂದವರಿಗೆ ಊಟಕ್ಕೆ ಎಲೆ ಕೊಡಲಾಗಿತ್ತು. ಕೃಷ್ಣ ಅಡಿಗರ ಮನೆಯ ಮುಂದಿನ ಚಪ್ಪರ ಅಷ್ಟೇನೂ ವಿಶಾಲವಾಗಿರಲಿಲ್ಲ. ಅಗ್ರಹಾರದಲ್ಲಿಯೇ ಎಲ್ಲಾ ಅಡಿಗರ ಮನೆಗಳು ಇದ್ದು ಯಾರ ಮನೆಯ ಮುಂದೆಯೂ ವಿಶಾಲವಾದ ಚಪ್ಪರ ಹಾಕುವಷ್ಟು ಜಾಗವಿಲ್ಲ. ಒಂದು ಮನೆಯ ಗೋಡೆಗೆ ತಾಗಿಯೇ ಇನ್ನೊಂದು ಮನೆ. ಶೌಚಕ್ಕೆ ಊರಿನ ಹಾಡಿ, ಹಾಡಿಯಲ್ಲಿ ಬರ್ಹಿದೆಸೆಗೆ ಹೋದವರು ದೇವಸ್ಥಾನದ ಕೆರೆಗೆ ಬಂದು ತಮ್ಮ ಅಂಡನ್ನು ಸ್ವಚ್ಛಗೊಳಿಸಿಕೊಳ್ಳುತ್ತಿದ್ದರು. ಹೆಣ್ಣು ಗಂಡು ಎಂಬ ಭೇದವಿಲ್ಲದೆ ಎಲ್ಲರಿಗೂ ಇದೇ ವ್ಯವಸ್ಥೆ. ಹೆಂಗಸರು ಹೊರಗಡೆಗೆ ಬೆಳಿಗ್ಗೆ ಬೇಗ ಹೋದರೆ ಗಂಡಸರು ನಿರ್ಭಿಡೆಯಾಗಿ ಎಷ್ಟು ಹೊತ್ತಿಗಾದರೂ ಹೋಗಿ ಬರುತ್ತಿದ್ದರು. ಅವರ ಕಿವಿಯಲ್ಲಿ ಜನಿವಾರ ಇತ್ತೆಂದರೆ ಅವರೀಗ ಹಾಡಿಯಿಂದ ಹಿಂದಿರುಗುತ್ತಿದ್ದಾರೆ ಎಂದೇ ಲೆಕ್ಕ. ಪರಪಳಿನಾಯಕನು ದೇವರ ಪೂಜೆಯ ಪಾತ್ರ, ಪರಿಕರಗಳನ್ನು ತೊಳೆಯಲೋಸುಗ ಕಟ್ಟಿದ ಚಿಕ್ಕ ಕೆರೆ ಹೀಗೆ 'ಸಕಲ ಕುಂಡೆ ತೀರ್ಥ'ವಾಗಿ ಪರಿವರ್ತಿತವಾದುದು ಆ ಕಾಲದಲ್ಲಿ ಸಾರ್ವಜನಿಕ ಆರೋಗ್ಯದ ಬಗ್ಗೆ ಇದ್ದ ನಿರ್ಲಕ್ಷ್ಯದ ದ್ಯೋತಕವೇ ಆಗಿತ್ತು. ತಂಬಿಗೆ ಕೈಯಲ್ಲಿ ಹಿಡಿದು ಹಾಡಿಗೆ ಹೋಗುವ ಪದ್ಧತಿ ಇವರಲ್ಲಿ ಇರಲೇ ಇಲ್ಲ ಎಂದು ಹೇಳಬೇಕು. ಪಾಯಖಾನೆ ಎನ್ನುವ ಶಬ್ದವನ್ನು ಇವರಂತೂ ಕೇಳಿಯೇ ಇರಲಿಲ್ಲ. ಇದೆಲ್ಲಾ ಈ ಅಗ್ರಹಾರಕ್ಕೆ ಬಂದುದು 1970ರ ನಂತರ, 1966ರರಲ್ಲಿ ವಿದ್ಯುತ್ ದೀಪ, 1970-71ರಲ್ಲಿ ಪಾಯಖಾನೆ, 75-76ರಲ್ಲಿ ರೇಡಿಯೋ, 1985-86ರಲ್ಲಿ ಟಿ.ವಿ. ಹೀಗೆ ಆಧುನಿಕ ನಾಗರಿಕತೆ ಈ ಹಳ್ಳಿಗೆ ನಿಧಾನವಾಗಿ ಕಾಲಿಕ್ಕಿತು.

ಅಂತೂ ಕೃಷ್ಣ ಅಡಿಗರ ಮನೆಗೆ ಸೊಸೆಯಾಗಿ ಬಂದ ಪದ್ಮಾವತಿ, ಮೈನೆರೆದು ಪಾಂಡವಾಡಿಗೆ ಬಂದಾಗ ಹದಿನೈದರ ತರುಣಿ ''ಪದ್ಮಾವತಿ ಬಲುಚೂಟಿ ಹುಡುಗಿ'', ''ದೊಂಡೆ ಜಾಸ್ತಿ'' ಎಂದೇ ಎಲ್ಲರಿಂದಲೂ ಪರಿಗಣಿಸಲ್ಪಟ್ಟಳು.

(ಹಣತೆಯ ಏಪ್ರಿಲ್-ಜೂನ್ ಸಂಚಿಕೆಯಲ್ಲಿ ಅಚ್ಚಾದ ಈ ಕಾದಂಬರಿಯ ಮೊದಲ ಕಂತಿಗೆ ಓದುಗರಿಂದ ಒಳ್ಳೆಯ ಪ್ರತಿಕ್ರಿಯೆ ಬಂದಿದ್ದು ಅವರ ಸಲಹೆಯಂತೆ ಈ ಕಾದಂಬರಿಯನ್ನು ಪುಸ್ತಕ ರೂಪದಲ್ಲಿ ಪ್ರಕಟಿಸಲು ನಿರ್ಧರಿಸಲಾಗಿದೆ. ಕರ್ನಾಟಕದ ಪುಸ್ತಕ ಪ್ರಕಾಶನದ ಮುಂಚೂಣಿಯಲ್ಲಿರುವ ಸಪ್ನಾ ಬುಕ್ ಹೌಸ್‌ನವರು ಇದನ್ನು ಪ್ರಕಟಿಸಲು ಮುಂದೆ ಬಂದಿದ್ದಾರೆ. ಸೆಪ್ಟೆಂಬರ್ 2003ರಲ್ಲಿ ಬುಕ್ ಹೌಸ್‌ನಿಂದ ಪ್ರಕಟಿತವಾಗುವ ನಿರೀಕ್ಷೆ ಇದೆ. – ಸಂಪಾದಕರು).

# ಸೌಂದರ್ಯ ಪ್ರಜ್ಞೆ

## (ವಿಶ್ವ ವಿಖ್ಯಾತ ಕಲಾವಿದ ಡಾ॥ ಸ್ವೆತಾಸ್ಲೋವ್ ರೋರಿಕ್ ಅವರ ವಿಚಾರಗಳಿಂದ ಪಡೆದ ಸ್ಫೂರ್ತಿ)

– ಎ.ಟಿ.ಎಸ್. ರಾವ್

ಸಾಮಾನ್ಯರಿಗೂ ಶ್ರೇಷ್ಠ ಕಲಾವಿದರಿಗೂ ಇರುವ ವ್ಯತ್ಯಾಸವೆಂದರೆ : ಸೌಂದರ್ಯವನ್ನು ಆಸ್ವಾದಿಸುವ ಮನೋಭೂಮಿಕೆ. ಅದನ್ನು ಅನ್ವೇಷಿಸುವ ಕಣ್ಣು. ಅಷ್ಟೇ ಅಲ್ಲ ಅದನ್ನು ತನ್ನ ಸುತ್ತಲಿನ ಕೋಟಿ ಕೋಟಿ ಜನತೆಗೆ ತಲುಪಿಸುವ ಹಂಬಲ. ಅವರ ದೃಷ್ಟಿ ದಾರಿದ್ರ್ಯವನ್ನು ಪರಿಹರಿಸುವ ತವಕ.

ಈ ಕಾರ್ಯವನ್ನು ತಮ್ಮ ಜೀವನಾದರ್ಶನವಾಗಿಟ್ಟುಕೊಂಡಿದ್ದ ಈ ಶತಮಾನದ ಶ್ರೇಷ್ಠ ಕಲಾವಿದ, ಮಾನವತಾವಾದಿಯೂ ಜೀವನದಲ್ಲಿ ಸೌಂದರ್ಯಾನುಭೂತಿಯನ್ನು ಸಂಪೂರ್ಣವಾಗಿ ಅನುಭವಿಸಿದ್ದ, ಪೂರ್ಣ ಆಶಾವಾದಿಯಾಗಿದ್ದ ಕಲಾವಿದ ಡಾ॥ ಸ್ವೆತಾಸ್ಲೋವ್ ರೋರಿಕ್ ಅವರ ಸಂಪರ್ಕಕ್ಕೆ ಬಂದ ನಾವುಗಳು ಅವರ ಈ ಅನುಭೂತಿಯನ್ನು ಅನೇಕಬಾರಿ ಅನುಭವಿಸಿದ್ದೇವೆ. ಅವರು ಯಾವ ಸಂದರ್ಭದಲ್ಲಿಯೇ ಮಾತನಾಡಲಿ ಈ ಕಳಕಳಿ ಅವರಲ್ಲಿರುತ್ತಿತ್ತು. ಅವರ ಪ್ರತಿ ಮಾತಿನಲ್ಲಿಯೂ ಸೌಂದರ್ಯ ಪ್ರಜ್ಞೆಯನ್ನು ಕುರಿತ ಅವರ ವಿಚಾರಗಳು ಇರುತ್ತಲೇ ಇದ್ದುವು.

ಸೌಂದರ್ಯವನ್ನು ಆಸ್ವಾದಿಸಲು ಈ ಪೃಥ್ವಿಯಲ್ಲಿ ಬೇಕಾದಷ್ಟು ಸುಂದರ ದೃಶ್ಯಗಳು ನಮ್ಮ ಅಕ್ಷಿ ಪಟಲದ ಮೇಲೆ ಬಂದು ನಿಲ್ಲುತ್ತವೆ. ಅದನ್ನು ಕನ್ನಡದ ಖ್ಯಾತ ಕವಿಗಳೂ, ದಾರ್ಶನಿಕರೂ ಆಗಿದ್ದ ಪೂಜ್ಯ ಡಾ॥ ಡಿ.ವಿ.ಜಿ. ಯವರು ತಮ್ಮ ನಿವೇದನವೆಂಬ ಪದ್ಯದಲ್ಲಿ ಹೀಗೆ ವರ್ಣಿಸಿರುವರು.

"ಮೇಲೆ ನೋಡೆ ಕಣ್ಣ ತಣಿಪ ನೀಲಪಟದಿ ವಿವಿಧ ರೂಪ ಜಾಲಗಳನ್ನು ನಿರ್ಮಿಸಿರ್ಪ ಚಿತ್ರ ಚತುರನಾರ್ ಕಾಲದಿಂದೆ ಮಾಸದೀ ವಿಚಿತ್ರವೆಸೆಪನಾರ್.... ವಸ್ತು ಚಯವ ನಿಂತು ರಚಿಪ ಶಿಲ್ಪ ವರ್ಯನಾರ್" ಭೂಮಿಯ ಮೇಲೆ ಮತ್ತು ಆಗಸದಲ್ಲಿ ಕಾಣುವ ಈ ದಿವ್ಯ ದೃಶ್ಯಗಳನ್ನು ರಚಿಸಿದ ಚಿತ್ರ ಶಿಲ್ಪಿ ನಮ್ಮ ಸೌಂದರ್ಯೋಪಾಸನೆಗಾಗಿಯೇ ಇವೆಲ್ಲವನ್ನೂ ಕೊಟ್ಟಿದ್ದಾನೆ. ಆಕಾಶವೆಂಬ ಬಹು ದೊಡ್ಡ ನೀಲ ಕ್ಯಾನ್ವಾಸಿನ ಮೇಲೆ ಪ್ರತಿಕ್ಷಣವೂ ರಚಿತವಾಗುವ ಈ ಚಿತ್ರಗಳು ಒಂದನ್ನೊಂದು ಹೋಲವು. ಎಷ್ಟು ಕಾಲವಾದರೂ ಮಾಸವು ಋತುಮಾನಗಳಿಗೆ ತಕ್ಕಂತೆ

ಈ ಚಿತ್ರಗಳಲ್ಲಿಯೂ ರೂಪಭೇದಗಳಾಗುತ್ತವೆ. ವಸಂತ ಋತುವಿನ ತೆಳು ಮೋಡಗಳ ವಿವಿಧಾಕೃತಿಗಳ ವ್ಯೋಮವು ವರ್ಣಮಯವಾಗಿ ರಂಜಿಸಿದರೆ, ಗ್ರೀಷ್ಮ ವರ್ಷ ಋತುಗಳ ಕಾರ್ಮೋಡಗಳು ಮಿಂಚು ಗುಡುಗುಗಳ ಘರ್ಜನೆಯ ರೌದ್ರ ರಸವನ್ನು ಪ್ರತಿಪಾದಿಸುವ ಚಿತ್ರಗಳಾದರೆ, ಶಿಶಿರ ಶರತ್ಕಾಲಗಳಲ್ಲಿ ತಾರಾಧಿಪತಿಯಾದ ಚಂದ್ರನ ರಾಜ್ಯವನ್ನು ಶುಭ್ರಾಕಾಶದಲ್ಲಿ ನೋಡುವುದೇ ಒಂದು ಸೊಗಸು. ಇಡೀ ರಾತ್ರಿ ಗಗನ ನಿರೀಕ್ಷಣೆ ನಡೆಸುತ್ತಿದ್ದರೂ ಬೇಸರವೆಂಬುದೇ ಬರುವುದಿಲ್ಲ. ಇನ್ನು ಹೇಮಂತ ಋತುಮಾರ್ಗಶಿರಕನ್ಯೆಯೊಂದಿಗೆ ಶಿಶಿರವನ್ನೊಡಗೊಂಡು ತಂಪು ಮಂಜಿನಿಂದ ದಿಕ್ಕು ದಿಕ್ಕುಗಳನ್ನೂ ಆವರಿಸಿ ಭೂಮಿಗೂ ಗಗನಕ್ಕೂ ಸಂಪರ್ಕ ಕಲ್ಪಿಸಿ ನಾವು ಅದರಲ್ಲಿ ತೇಲುವ ಅನುಭವವನ್ನು ಮೂಡಿಸುತ್ತದೆ. ಸೃಷ್ಟಿ ಕರ್ತನ ಒಲವಿನ ಅಭಿಷೇಕದಲ್ಲಿ ನಾವು ಸಂಪೂರ್ಣವಾಗಿ ಮಿಂದು ಅದರಲ್ಲಿಯೇ ಲೀನರಾಗುತ್ತೇವೆ. ಹೀಗೆ ಸೌಂದರ್ಯಾರಾಧಕರು ಈ ಋತುಮಾನಗಳ ಸುಂದರ ಚಿತ್ರಗಳನ್ನು ಸಂಪೂರ್ಣವಾಗಿ ಸವಿಯುತ್ತಾರೆ.

ಇನ್ನು ಈ ಭೂಮಿಯ ಮೇಲಿನ ಶಿಲ್ಪ ರಚನೆಯನ್ನು ಸವಿಯಬೇಕೆಂದರೆ ದೂರದಿಗಂತದಲ್ಲಿ, ಕಾಣುವ ಬೆಟ್ಟಗಳು ನಾವು ಯಾವುದೋ ಗಿರಿದುರ್ಗದ ಕೋಟೆಯ ಗೋಡೆಗಳ ನಡುವೆ ಇರುವ ಅನುಭವವನ್ನು ಮೂಡಿಸುತ್ತವೆ. ಮಲೆನಾಡಿನ ನಿತ್ಯ ಹರಿದ್ವರ್ಣದ ವನರಾಜಿಯ ವರ್ಣವೈಭವವು ಎತ್ತರ ತಗ್ಗುಗಳ, ಏರಿಳಿತಗಳ ಶಿಖರ ಕಂದರಗಳ ಹರವಿನ ಮೇಲೆ ಹಾಸಿದ ಹಸಿರು ಮಖಮಲ್ಲಿನ ವಿವಿಧ ವರ್ಣಗಳ ಕಸೂತಿ ಕೆಲಸದಂತೆ ರಂಜಿಸುತ್ತದೆ. ಆಕಾಶಕ್ಕೆ ನಿಂತ ವಿವಿಧ ವೃಕ್ಷಗಳು ಆಕಾಶಕ್ಕೆ ಭೂಮಿಯು ಕೊಡುತ್ತಿರುವ ದೀರ್ಘ ಬಾಹುಗಳ ನಮಸ್ಕಾರದಂತೆ ಶೋಭಿಸುತ್ತವೆ. ಆ ಕಪ್ಪು ಹಸಿರುಮಿಶ್ರಿತ ಸೌಂದರ್ಯದ ನಡುವೆ ಧುಮ್ಮಿಕ್ಕುವ ಜಲಪಾತಗಳು ಆಕಾಶವು ತೃಪ್ತಿಯಿಂದ ಭೂಮಿಗೆ ಕಳಿಸುತ್ತಿರುವ ಜೀವರಸದಂತೆ ಬಿಳಿಯ ಮುತ್ತುಗಳ ರಾಶಿಯನ್ನು ಸುರಿದಂತೆ. ಮುಂಜಾನೆಯ ತಂಪು ಮಂಜಿನ ಹೊಗೆ ಪರಿಸರವನ್ನು ಆವರಿಸಿದಂತೆ ಕಣ್ಣಿಗೆ ಹಬ್ಬವನ್ನು ತಂದರೆ ಭೂಮಿಯೂ ಸಹ ಕೃತಜ್ಞತೆಯಿಂದ ಆಜೀವ ರಸವನ್ನು ಸ್ವೀಕರಿಸಿ ವಂದಿಸಲು ಏಳುತ್ತಿರುವ ಬಿಳಿಯ ನೀರಿನ ಹೊಗೆ. ಇವೆಲ್ಲವನ್ನೂ ನೋಡುವ ಮಾನವ ತನ್ನ ಇರವನ್ನೇ ಮರೆಯುತ್ತಾನೆ. ಮಾತುಗಳಲ್ಲಿ ವರ್ಣಿಸಲಾಗದ ದಿವ್ಯ ಸೌಂದರ್ಯಾನುಭೂತಿಯಲ್ಲಿ ಲೀನವಾಗಿ ಬಿಡುತ್ತಾನೆ, ಕಣಿವೆಗಳನ್ನಾಶ್ರಯಿಸಿದ ವನರಾಜಿಯ ಸೊಬಗು, ಗಿರಿಕಂದರಗಳಲ್ಲಿ ಎದ್ದು ಕಾಣುವ ಹಸಿರು ಹೊದಿಕೆಯ ಭವ್ಯತೆ ನಮ್ಮ ಕಣ್ಣುಗಳನ್ನು ತಣಿಸುತ್ತವೆ.

ಇನ್ನು ಬಯಲು ಸೀಮೆಯಲ್ಲಿ ನಮ್ಮ ಕಣ್ಣುಗಳನ್ನು ತಣಿಸಲು ಚಿಕ್ಕ ದೊಡ್ಡ ಬೆಟ್ಟಗಳಲ್ಲಿ ಸ್ವಾಭಾವಿಕವಾಗಿ ರೂಪುಗೊಂಡಿರುವ ಶಿಲಾ ವಿನ್ಯಾಸಗಳು ಯಾವ ಶಿಲ್ಪಿಯೂ, ಸಂಯೋಜಿಸಿ ರಚಿಸಲಾಗದ ಅಮರ ಕಲಾಕೃತಿಗಳಾಗಿವೆ. ಆ ಬೆಟ್ಟಗಳ ಏರಿಳಿತಗಳ ತಪ್ಪಲುಗಳು ಅವನ್ನು ಅಂಚುಕಟ್ಟಿಕೊಂಡು ಹೊರಡುವ ಸಣ್ಣ ಸಣ್ಣ ಹೊಳೆಗಳು ಇವೆಲ್ಲವನ್ನೂ ತನ್ನದಾಗಿಸಿಕೊಳ್ಳಲು ಮಲೆನಾಡಿನ ಹಚ್ಚ ಹಸುರಿನ ವನಗಳಿಂದ ಎತ್ತರದ ಗಿರಿದುರ್ಗಗಳಿಂದ ಹರಿದುಬರುವ ನದಿಗಳು.

ಆ ನದಿಗಳಲ್ಲಿ ಬಳುಕುತ್ತಾ ಭೋರ್ಗರೆಯುತ್ತಾ ಸುರುಳಿಗಳಾಗಿ ಸುತ್ತುತ್ತಾ ಒಂದೊಂದೆಡೆ ನಿಧಾನವಾಗಿ ಗೊತ್ತಾಗದಂತೆ ಹರಿಯುವ ಜೀವಜಲದ ಸೊಬಗನ್ನು ಕಂಡ ನಮ್ಮ ಪೂರ್ವಜರು ನದಿಗಳನ್ನು ಪವಿತ್ರಳಾದ ತಾಯಿಗೆ ಹೋಲಿಸಿ ಅದೇ ಹೆಸರುಗಳಿಂದ ನದಿಗಳನ್ನು ಕರೆದಿದ್ದಾರೆ. ಆ ನದೀ ಮೂಲವಾದ ಪರ್ವತ ಶಿಖರಗಳಲ್ಲಿ ದೈವೀ ದರ್ಶನವನ್ನು ಪಡೆದು ದೇವಾಲಯಗಳನ್ನು ರಚಿಸಿದ್ದಾರೆ.

ನಮ್ಮ ಧರ್ಮ ಯಾವುದೇ ಇರಲಿ ಕಲಾತ್ಮಕವಾದ ಪೂಜಾಸ್ಥಳವನ್ನು ಹೊಂದುವುದು ಸೌಂದರ್ಯಾನ್ವೇಷಣೆಯ ಗುರಿ. ಆ ದೃಷ್ಟಿಯಿಂದ ಭಾರತೀಯರಾದ ನಮಗೆ ನಮ್ಮ ಪೂರ್ವಜರು ಕಲೆಯ ಬಲೆಗಳಾದ ಅಸಂಖ್ಯ ದೇವಾಲಯಗಳನ್ನು ಬಿಟ್ಟುಹೋಗಿದ್ದಾರೆ. ಶಿಲ್ಪಕಲೆಯ ಅದ್ಭುತಗಳೆನಿಸಿರುವ ಸುಂದರ ದೇವಾಲಯಗಳು ನಮ್ಮ ದೃಷ್ಟಿ ದಾರಿದ್ರ್ಯವನ್ನು ಕಳೆದು ಕಣ್ಣಿಗೆ ಹಬ್ಬದೂಟದ ಸವಿಯನ್ನೀಯಲು ಕೈಬೀಸಿ ಕರೆಯುತ್ತಿವೆ.

ಇನ್ನು ನಮ್ಮ ಸುತ್ತಲೂ ಬೆಳೆದು ನಿಂತಿರುವ ಜೀವನಾಧಾರವಾದ ಸಸ್ಯ ಸಂಪತ್ತು ನಮಗೆ ಬೇಕಾದಷ್ಟು ಹಣ್ಣು ಹೂವುಗಳನ್ನು ಹೊತ್ತು, ನಮ್ಮ ಕಣ್ಮನಗಳನ್ನು ತಣಿಸುವುದೇ ಅಲ್ಲದೆ ಕುಶಲ ಕಲೋಪಾಸಕನೂ ನಿರ್ಮಿಸಲಸಾಧ್ಯವಾದ ಸುಂದರ ಪುಷ್ಪಗಳ ರಾಶಿಯನ್ನೇ ನಮಗೆ ನೀಡುತ್ತದೆ. ಹೂವು ತನ್ನದೇ ಆದ ಮೃದು ಮಾಧುರ್ಯದಿಂದ, ಸುಗಂಧದಿಂದ, ಸುಂದರ ವಿನ್ಯಾಸಗಳಿಂದ ಸೌಂದರ್ಯ ಬೋಧೆಯನ್ನು ಮಾಡಿಕೊಡುತ್ತದೆ.

ಪ್ರತಿದಿನವೂ ಬೆಳಗು ಮುಂಜಾನೆಗಳಲ್ಲಿ, ಸಂಜೆಗಳಲ್ಲಿ ಒಡಮೂಡುವ ಸೂರ್ಯೋದಯ ಸೂರ್ಯಾಸ್ತದ ವರ್ಣ ಚಿತ್ರಗಳನ್ನು ನೋಡುವ ಮನಸ್ಸಿದ್ದರೆ ಬೇಕಾದಂತೆ ಪ್ರತಿ ಮುಂಜಾನೆ ಸಂಜೆಗಳಲ್ಲಿಯೂ ನೋಡಬಹುದು. ಇದಕ್ಕೆ ಯಾವ ಶುಲ್ಕವನ್ನೂ ಕೊಡಬೇಕಾಗಿಲ್ಲ. ನೋಡಿ ಆನಂದಪಡುವ ಕಣ್ಣು ಬೇಕಷ್ಟೇ.

ನಮ್ಮ ಭೂಮಂಡಲದ ಮುಕ್ಕಾಲು ಭಾಗವನ್ನಾಕ್ರಮಿಸಿರುವ ಸಮುದ್ರಕ್ಕೆ ತನ್ನದೇ ಆದ ಸೌಂದರ್ಯವಿದೆ. ಲಯವಿದೆ, ಸಂಗೀತವಿದೆ. ಗಾಂಭೀರ್ಯ ರೌದ್ರ ಲಾಲಿತ್ಯಗಳಿವೆ.

ಇವೆಲ್ಲವನ್ನೂ ತನ್ನ ಸೆರಗಾದ ಅಲೆಗಳ ಮೂಲಕ ತೋರಿಸಿ ಚೆಲುವಾದ ಚಿಕ್ಕ ಬಿಳಿಯ ಹರಳುಗಳಿಂದ, ಕಪ್ಪೆಚಿಪ್ಪು, ಶಂಖಗಳಿಂದ ಕೂಡಿದ ಮರಳುದಿನ್ನೆಗಳ ಅಂಚನ್ನು ಹೊಂದಿ ವೀಕ್ಷಕರಿಗೆ ಅಮಿತಾನಂದವನ್ನೊದಗಿಸುತ್ತದೆ.

ಇನ್ನು ನಮ್ಮ ದಿನನಿತ್ಯದ ವ್ಯವಹಾರಗಳಲ್ಲಿ ಫ್ಯಾಷನ್ ಎಂದು ಹೇಳಿಕೊಳ್ಳುತ್ತಾ ಸುಂದರ ಉಡುಪುಗಳನ್ನು ತೊಟ್ಟು ಅಲಂಕರಿಸಿಕೊಳ್ಳುವ ಮನುಷ್ಯ ಸುಂದರ ವಾಸಗೃಹಗಳನ್ನು ಕಟ್ಟಿಕೊಳ್ಳುತ್ತಾನೆ. ಆ ಮನೆಯ ಅಂದವನ್ನು ಹೆಚ್ಚಿಸಲು ಸುಂದರ ವಸ್ತುಗಳನ್ನು ಶೇಖರಿಸುತ್ತಾನೆ. ಪ್ರದರ್ಶಿಸುತ್ತಾನೆ. ಅಷ್ಟೆ ಅಲ್ಲ, ಸೌಂದರ್ಯವನ್ನು ಆಸ್ವಾದಿಸಲು ಚಿತ್ರಕಲಾವಿದರ ಸುಂದರ ಚಿತ್ರಗಳ ವೀಕ್ಷಣೆಯೇ ಅಲ್ಲದೆ, ಸುಶ್ರಾವ್ಯ ಸಂಗೀತ ಮನುಷ್ಯನನ್ನು ಬೇರೊಂದು ಪ್ರಪಂಚಕ್ಕೆ ಸೆಳೆದೊಯ್ಯುತ್ತದೆ. ಸಂಗೀತ ಮನುಷ್ಯನನ್ನಷ್ಟೇ ಅಲ್ಲದೆ ಮೃಗ ವರ್ಗಗಳ ಕ್ರೌರ್ಯವನ್ನೂ ಸಹ ಕರಗಿಸುತ್ತದೆ. ದೃಶ್ಯ, ಶ್ರಾವ್ಯ ಮಾಧ್ಯಮಗಳಾದ ನೃತ್ಯ ನಾಟಕಗಳು ಮನುಷ್ಯ ಸೌಂದರ್ಯಾನುಭೂತಿಯನ್ನು ಪಡೆಯಲು ಕಲ್ಪಿಸಿಕೊಂಡ ವಿವಿಧ ಪ್ರಾಕಾರಗಳು.

ಇಷ್ಟೆಲ್ಲಾ ಇದ್ದೂ ಮಾನವ ತನ್ನ ಹೃದಯ ಸೌಂದರ್ಯವನ್ನು ಅನ್ವೇಷಿಸುವ ಕಲಾ ಪ್ರಜ್ಞೆಯನ್ನೂ ಬೆಳೆಸಿಕೊಳ್ಳದೇ ಹೋದರೆ ಅಂತಹವನನ್ನು ಸುಸಂಸ್ಕೃತನೆಂದು ಕರೆಯಲಾಗದು. ಅಂತಹವನು ತನ್ನ ನಾಡಿನ ಸಂಸ್ಕೃತಿಗೆ ತನ್ನ ಪಾಲಿನ ಕಾಣಿಕೆಯನ್ನು ಕೊಡಲಾರ. ಈಶ್ವರನ ಈ ಸೃಷ್ಟಿಯಲ್ಲಿ ಕುರೂಪವೆಂಬುದೆ ಇಲ್ಲ. ನಾವು ಕಾಣುವ ಪಶುಪಕ್ಷಿ, ಕ್ರಿಮಿಕೀಟಗಳೂ ಸಹ ಪ್ರಕೃತಿದೇವತೆ ಸೌಂದರ್ಯಾನ್ವೇಷಣೆಗೆ ನಮಗಿತ್ತಿರುವ ವರಗಳು. ಬಣ್ಣದ ಚಿಟ್ಟೆ, ಸಂಗೀತವನ್ನು ಹಾಡುವ ಜೀರಂಗಿ, ಸುಶ್ರಾವ್ಯ ಧ್ವನಿಯನ್ನು ಹೊರಡಿಸುವ ಕೋಗಿಲೆ ಮತ್ತು ಮಧುರ ಕಂಠದ ಬೇರೆ ಹಕ್ಕಿಗಳು, ಅಟ್ಟ ಹಾಸದಿಂದ, ಗಾಂಭೀರ್ಯ ಚೆಲುವುಗಳಿಂದ ನರ್ತಿಸುವ ನವಿಲು, ಸುಂದರ ಕಣ್ಣುಗಳಿಂದ ಕೊಂಬುಗಳಿಂದ ನಮ್ಮತ್ತ ಬೆರಗಾಗಿ ನೋಡುವ ಜಿಂಕೆ, ಸಾಕು ಪ್ರಾಣಿಗಳಾದ ಹಸು, ಎತ್ತು, ಆಡು, ಕುರಿ ನಂಬಿಕೆಯ ಬಂಟ ನಾಯಿ, ಮುದ್ದಿನ ಬೆಕ್ಕು. ಈ ಪ್ರಾಣಿಗಳ ಸೌಂದರ್ಯವೂ ನೋಡಿ ಮೆಚ್ಚುವಂತಹುದೇ ಕುರೂಪದ್ದೆಂದುಕೊಂಡಿರುವ ಕಾಗೆ, ಗೂಬೆಗಳಲ್ಲಿಯೂ ಸೌಂದರ್ಯವನ್ನು ಅನ್ವೇಷಿಸುವುದೇ ಸೌಂದರ್ಯ ಪ್ರಜ್ಞೆ ಬೆಳೆಸಿಕೊಂಡ ಅನುಭವ. ಈ ಮಾತನ್ನು ಹೇಳುವಾಗ ಕನ್ನಡನಾಡಿನ ಜನಪದ ಗೀತೆಯೊಂದರಲ್ಲಿ ನಮ್ಮ ಗ್ರಾಮಗಳ ಅವಿದ್ಯಾವಂತ ಹಳ್ಳಿಗಾಡಿನ ಹೆಣ್ಣು ಮಗಳೊಬ್ಬಳು ಹಾಡಿಕೊಂಡ ಹಾಡು ನೆನಪಿಗೆ ಬರುತ್ತದೆ, ತಾಯಿಯೊಬ್ಬಳು ತನ್ನ ಅಳುತ್ತಿರುವ ಮಗುವನ್ನು ಹೀಗೆ ವರ್ಣಿಸುತ್ತಾಳೆ.

''ಅಳುವ ಕಂದನ ತುಟಿಯು ಹವಳದಾ ಕುಡಿಹಾಂಗ
ಕುಡಿಹುಬ್ಬು ಬೇವಿನೆಸಳ್ಹಾಂಗ
ಕಣ್ಣೋಟ ಶಿವನ ಕೈಯ್ಯಲಗು ಹೊಳೆದ್ಹಾಂಗ ॥''

ಸಾಮಾನ್ಯವಾಗಿ ನಗುತ್ತಿರುವ ಮಗುವನ್ನೇ ನಾವು ಇಷ್ಟಪಡುತ್ತೇವೆ. ಅಳುವ ಮಗು ನಮಗೆ ಸಹ್ಯವಲ್ಲ. ಇಲ್ಲಿ ತಾಯಾದವಳು ತನ್ನ ಅಳುತ್ತಿರುವ ಮಗುವಿನಲ್ಲಿಯೂ ಸೌಂದರ್ಯವನ್ನು ಸವಿಯಬಲ್ಲಳು. ಈ ಅನುಭವವೇ ಸೌಂದರ್ಯಪ್ರಜ್ಞೆ ಬೆಳೆದವರಲ್ಲಿರಬೇಕಾದ ವಿಶೇಷ ಗುಣ. ಆಗಲೇ ನಮ್ಮ ಬಾಳು ಹಸನಾಗಿ ನಾವು ಸುಸಂಸ್ಕೃತರೆನಿಸಿಕೊಂಡೇವು.

ನಮ್ಮ ಪೂರ್ವಜರು ''ಸೌಂದರ್ಯವೇ ಸತ್ಯ. ಸತ್ಯವೇ ಸೌಂದರ್ಯ'' ಎಂದಿದ್ದಾರೆ. ಸೌಂದರ್ಯವನ್ನು ಸವಿಯಬಲ್ಲ ಮನುಷ್ಯ ಸುಸಂಸ್ಕೃತನಾಗಿರುತ್ತಾನೆ. ಅವನ ಪ್ರತಿ ಕೆಲಸವೂ ಅಚ್ಚುಕಟ್ಟಾಗಿ ಪರಿಪೂರ್ಣವಾಗಿರುತ್ತದೆ. ಅವನು ಪರಿಪೂರ್ಣತೆಯ ಕಡೆಗೆ ಅಡಿ ಇಡುತ್ತಾನೆ. ಅದು ಅವನ ಪ್ರತಿ ದಿನದ ಬದುಕಿನಲ್ಲಿ ಪ್ರತಿಫಲಿಸುತ್ತದೆ. ಒಳ್ಳೆಯ ವಿಚಾರಗಳಲ್ಲಿ ಅವನ ಅಭಿರುಚಿ ಬೆಳೆಯುತ್ತದೆ. ಬೇರೆಯವರ ವಿಚಾರಗಳ ಬಗೆಗೆ ಉದಾರಿಯೂ ಸಹಿಷ್ಣುವೂ ಆಗಿರುತ್ತಾನೆ. ಬೇರೆಯವರನ್ನು ಸರಿಯಾಗಿ ಅರ್ಥ ಮಾಡಿಕೊಳ್ಳುತ್ತಾನೆ. ತನ್ನ ಸನ್ನಡತೆಯಿಂದ ಅವರುಗಳ ಹೃದಯದಲ್ಲಿ ಸ್ಥಾನಗಳಿಸುತ್ತಾನೆ. ಜನತೆ ಅವನ ಸುವಿಚಾರಗಳ ಪ್ರಭಾವಕ್ಕೊಳಗಾಗುತ್ತಾರೆ. ಇಂತಹ ಜನ ಹೆಚ್ಚುವುದರಿಂದ ಮನುಷ್ಯರಲ್ಲಿ ಸದ್ಭಾವನೆ ಹೆಚ್ಚಿ ಅಪನಂಬಿಕೆಗಳು ಕಡಿಮೆಯಾಗಿ ಜನಾಂಗ ಉತ್ತಮಗೊಳ್ಳುತ್ತದೆ. ಕ್ರೌರ್ಯಕ್ಕೆ ಅಲ್ಲಿ ಸ್ಥಳವೇ ಇರುವುದಿಲ್ಲ. ಹಿಂಸಾರಹಿತ ಸಮಾಜದ ಸೃಷ್ಟಿ ಜನರನ್ನು ಸೌಂದರ್ಯೋಪಾಸಕರಾಗಿ ಮಾಡುವುದರಲ್ಲಿಯೇ ಇದೆ.

ಇಂತಹ ಉದಾತ್ತ ವಿಷಯಗಳನ್ನು ಡಾ॥ ರೋರಿಕ್‌ರವರು ತಮ್ಮ ಜೀವಮಾನದುದ್ದಕ್ಕೂ ಬೋಧಿಸಿದರು. ಮತ್ತು ಅಂತಹ ಉದಾತ್ತ ತತ್ವಗಳ ಸಂವಹನಾ ಸಾಧನವಾದ ದೃಶ್ಯಕಲೆಯನ್ನು ಚಿತ್ರರಚನೆಯ ಮೂಲಕ ಅಭಿವ್ಯಕ್ತಗೊಳಿಸಿದರು. ಮಾತಿಗೆ ಶಬ್ದಗಳ ಮಿತಿ ಇದೆ. ಆದರೆ ಚಿತ್ರಗಳ ಭಾಷೆಗೆ ಮಿತಿ ಎಂಬುದೇ ಇಲ್ಲ. ಭಾಷೆಯ ತೊಡಕಿಲ್ಲ. ಡಾ॥ ರೋರಿಕ್ ಅವರ ಚಿತ್ರಗಳ ಪ್ರದರ್ಶನವನ್ನು ನೋಡಿದಾಗ ಅವರ ಜೀವನಾದರ್ಶ ಅವರು ಅನುನಿತ್ಯವೂ ಹೇಳುತ್ತಿದ್ದ ಸೌಂದರ್ಯಬೋಧೆಯ ಪಾಠ ನಮಗಾಗುತ್ತದೆ. ಒಂದು ಸುಂದರಕಾವ್ಯವನ್ನು ಭಾಷೆಯ ತೊಡಕಿಲ್ಲದೆ ನಾವು ದೃಶ್ಯಮಾಧ್ಯಮದ ಮೂಲಕ ಆಸ್ವಾದಿಸುವ ಭಾಗ್ಯ ನಮಗೆ ಅವರ ಚಿತ್ರಗಳ ವೀಕ್ಷಣೆಯಿಂದ

ದೊರೆಯುತ್ತದೆ. ಇಂತಹ ಸುಂದರ ವಿಚಾರಗಳನ್ನು ಚಿಂತಿಸಿ ಜನ ಸಾಮಾನ್ಯರಿಗೆ ಅವನ್ನು ಆನಂದಿಸಲು ಕಾಳಜಿ ವಹಿಸಿದ ಕಾರಣದಿಂದಲೇ ಅವರು ಮಹಾನ್ ಕಲಾವಿದರಾದರು. ಸೌಂದರ್ಯಾರಾಧಕರೂ, ಸೌಂದರ್ಯ ಸಂವಾಹಕರೂ ಆದರು. ಅವರು ಪ್ರತಿಸಲವೂ ಹೇಳುತ್ತಿದ್ದ ಈ ಉಪದೇಶದೊಂದಿಗೆ ನನ್ನೀ ಲೇಖನವನ್ನು ಮುಗಿಸುತ್ತೇನೆ.

''ಸುಂದರ ಆಕೃತಿಗಳ ದರ್ಶನದ ಮೂಲಕ
ಸುಂದರ ವಿಚಾರಗಳತ್ತ ನಡೆಯೋಣ
ಸುಂದರ ವಿಚಾರಗಳ ಮೂಲಕ
ಸುಂದರ ಬಾಳಿನತ್ತ ನಡೆಯೋಣ
ಸುಂದರ ಬಾಳನ್ನು ನಡೆಸುವುದರ ಮೂಲಕ
ಪರಮ ಸುಂದರ ಸತ್ಯವನ್ನು ಸೇರೋಣ''

ಓಂ ಸತ್ಯಂ ಶಿವಂ ಸುಂದರಂ

## ಚುಟುಕಗಳು

### .......ನೀರೆಗೆ

ಸೀರೆ ಬದಲಿಸುವುದರಲ್ಲೇ,
ನೀರೆ ನಿನ್ನ ಜಾಯಾಮಾನ ಕಳೆಯಿತು.
ಬೇರೇನ ಮಾಡಲಾರೆ ಏಕೆ?
ನನಗೀಗ ಅರ್ಜಂಟು, ಊಟ ಹಾಕೆ

### ನನ್ನ ನಲ್ಲ

ನನ್ನೂಟ ಮುಗಿಯುವ ಮುನ್ನವೇ
ಎಕ್ಸಾಸ್ಟ್ ಆಗುವ ನನ್ನ ಗಂಡ
ನೀ ಬರಿಯ ದಂಡ
ನನಗೆ ಮುದ್ದೆ
ನಿನಗೋ ನಿದ್ದೆ

– ಪಾ.ಚಂ. ಚಡಗ

# ದಾನ

– ಡಾ|| ಸಾ. ಶಿ. ಮರುಳಯ್ಯ

ಕೊಡುವಾತನೇ ಹರನು ಪಡೆವಾತನೇ ನರನು
ಒಡಲು ಒಡವೆಗಳು ಕೆಡೆದು ಹೋಗುವ ಮುನ್ನ
ಕೊಡು ಪಾತ್ರವರಿದು ಸರ್ವಜ್ಞ

ದಾನದ ಮಹತ್ವ ಈ ವಚನದ ತಿರುಳು.

ಪರಮ ಪರಿವ್ರಾಜಕನೂ ಪೂರ್ಣಲೋಕಾನುಭವಿಯೂ ಆದ ಸರ್ವಜ್ಞನು ಇಲ್ಲಿನ ಮೂರು ಪಾದಗಳಲ್ಲಿ ಮೂರು ಅಂಶಗಳನ್ನು ಸ್ಪಷ್ಟೀಕರಿಸಿದ್ದಾನೆ.

ಮೊದಲನೆಯ ಪಾದವು ದಾನ ಕೊಡುವವನು ದೇವ ಸಮಾನ, ದಾನ ಪಡೆಯುವವನು ಮಾನವ ಸದೃಶ ಎಂಬಂಶವನ್ನು ತಿಳಿಸುತ್ತದೆ. ಇಲ್ಲಿ 'ಮಾನವ' ಎಂಬ ಶಬ್ದಕ್ಕೆ 'ಕೀಳು' ಎಂದರ್ಥವಲ್ಲ; ದೇವನಷ್ಟೇ ಸತ್ತ್ವಶಾಲಿ ಚೈತನ್ಯ ಎಂದು. ಏಕೆಂದರೆ ಮನುಷ್ಯರೇ ಅಲ್ಲದ ಪಶುವಿಗೂ ಕಡೆಯಾದ ಹೀನ ವ್ಯಕ್ತಿಗಳಿದ್ದಾರೆ ನಮ್ಮಲ್ಲಿ. ಅಂಥವರಲ್ಲದ ನಿಜವಾದ ಹಾಗೂ ಗೌರವದ ಅರ್ಥದಲ್ಲಿ ' ಮಾನವ' ಎಂಬ ಪದವನ್ನು ಅರ್ಥೈಸಲಾಗಿದೆ. ಇಂತಹ ದೇವ ಮಾನವರಿದ್ದರೇನೇ ವಿಶ್ವ ಸಾಮರಸ್ಯ. ಇವರಲ್ಲಿ ಭಿನ್ನಭಾವ ಇಲ್ಲ ಇರಬಾರದು. ಕೊಡುವವನ ಕೈಮೇಲು ಪಡೆವವನ ಕೈ ಕೆಳಗು ಎಂಬ ಭೇದ ಸಲ್ಲ ಹಲವು ವೇಳೆ ದಾನ ಕೊಡಬೇಕು ಎಂದಂದುಕೊಂಡರೂ ಅದನ್ನು ಸ್ವೀಕರಿಸುವ ವ್ಯಕ್ತಿಯೇ ಸಿಗದಿರಬಹುದು. ವ್ಯಕ್ತಿ ಸಿಕ್ಕಾಗ ಮಾತ್ರ ದಾನಿಯ ದಾನಗುಣ ಪ್ರಕಾಶಕ್ಕೆ ಬರುವುದು; ಆ ಮೂಲಕ ಅವನು ಧನ್ಯನಾಗುವುದು ಕೂಡ. ಆದ್ದರಿಂದ ದಾನ ಕೊಡುವವನು ಎಷ್ಟು ಮುಖ್ಯವೊ, ಗೌರವಾನ್ವಿತನೂ, ದಾನ ಸ್ವೀಕರಿಸುವವನೂ ಅಷ್ಟೇ ಮುಖ್ಯ ಮತ್ತು ಗೌರವಾನ್ವಿತ. ಕೊಟ್ಟವನಿಗೆ ಅಲೌಕಿಕ ಪುಣ್ಯ ಪ್ರಾಪ್ತಿ. ಪಡೆದವನಿಗೆ ಲೌಕಿಕ ಅಗತ್ಯತೆಯ ಪೂರೈಕೆ ಮತ್ತು ತೃಪ್ತಿ. ಈ ಅಂತಾಭಿವ್ಯಕ್ತಿ ಮೇಲಿನ ತ್ರಿಪದಿಯ ಸಾಲು.

'ಒಡಲು ಒಡವೆಗಳು ಕೆಡೆದು ಹೋಗುವ ಮುನ್ನ' ಎಂಬ ಎರಡನೆಯ ಪಾದದಲ್ಲಿ ದಾನವೀವ ಸಮಯವನ್ನು ಸೂಚಿಸಿದ್ದಾನೆ ಸರ್ವಜ್ಞ. ದಾನವನ್ನು ಯಾವಾಗ ಕೊಡಬೇಕು:

ನೆರೆ ಕೆನ್ನೆಗೆ ತೆರೆಗಲ್ಲಕೆ ಶರೀರ ಗೂಡುವೋಗದ ಮುನ್ನ
ಹಲ್ಲು ಹೋಗಿ, ಬೆನ್ನುಬಾಗಿ, ಅನ್ಯರಿಗೆ ಹಂಗಾಗದ ಮುನ್ನ

ಕಾಲಮೇಲೆ ಕೈಯನೂರಿ ಕೋಲ ಹಿಡಿಯದ ಮುನ್ನ
ಮುಪ್ಪಿಂದೊಪ್ಪವಳಿಯದ ಮುನ್ನ, ಮೃತ್ಯು ಮುಟ್ಟದ ಮುನ್ನ

ಅಂತೆಯೇ ಕೊಡುವ ವಸ್ತು ಕೊಳೆತು ಕೆಟ್ಟು ಹೋಗುವ ಮುನ್ನ. ಹಳಸಿ ಹಾಳಾಗುವ ಮುನ್ನ ಕೈ ಎತ್ತಿ ದಾನ ಕೊಡಬೇಕು. ಅನ್ನ ಹಳಸಿದೆ ತಿನ್ನಲಿಕ್ಕೆ ಬಾರದು, ಅಂದರೆ ಭಿಕ್ಷುಕನಿಗೆ ಹಾಕು ಎಂಬ ಮನೋಭಾವ ಯಾರಲ್ಲೂ ಬೆಳೆಯಬಾರದು ಎಂಬ ಸಂದೇಶ ಇದೆ ಈ ಎರಡನೆಯ ಸಾಲಿನಲ್ಲಿ.

ಮೂರನೆಯ ಸಾಲು ಬಹು ಮುಖ್ಯವಾದದ್ದು. ದಾನ ಯಾವಾಗಲೂ ಸತ್ಪಾತ್ರಕ್ಕೆ ಸಲ್ಲಬೇಕು. ಅಂತಹ ಸತ್ಪಾತ್ರವನ್ನು ಹುಡುಕಿ ನಾವು ದಾನ ಮಾಡಬೇಕು. ಅಪಾತ್ರಕ್ಕೆ ಕೊಟ್ಟದ್ದಾದರೆ ಅನಾಹುತಕ್ಕೆ ನಾವೇ ಅಡಿಗಲ್ಲು ಹಾಕಿದಂತಾಗುತ್ತದೆ. ಉದಾಹರಣೆಗೆ 'ಯಾರ ತಲೆಯ ಮೇಲೆ ನೀನು ಕೈ ಇಡುತ್ತೀಯೋ ಅವರು ಸುಟ್ಟು ಬೂದಿಯಾಗಲಿ' ಎಂದು ಶಿವ ವರ ಕೊಟ್ಟ, ಕೂಡಲೆ ಭಸ್ಮಾಸುರ ಅವನ ಮೇಲೆ ತನ್ನ ಮೊದಲ ಪ್ರಯೋಗ ಮಾಡ ಹೊರಟ. ನಾವೂ ಅನೇಕ ವೇಳೆ ಇಂತಹ ಅಪಾಯದಲ್ಲಿ ಸಿಲುಕಿಕೊಳ್ಳುವುದುಂಟು. ಅದನ್ನೇ ಕನ್ನಡದ ಗಾದೆ ಹೇಳುತ್ತಾ: 'ಕೊಟ್ಟವನು ಕೋಡಂಗಿ ಇಸಕೊಂಡವನು ವೀರಭದ್ರ' ಎಂದು. ಅನ್ನವಿಟ್ಟ ಕೈಯನ್ನೇ ಕಚ್ಚುವ ಹುಚ್ಚು ನಾಯಿಗಳೇನೂ ಕಡಿಮೆ ಇಲ್ಲ ಈ ಜಗತ್ತಿನಲ್ಲಿ. ವಿದ್ಯಾರ್ಥಿ, ಸಹೋದ್ಯೋಗಿ, ಸ್ನೇಹಿತ ರಕ್ತ ಸಂಬಂಧಿ ಒಬ್ಬರೇ ಇಬ್ಬರೆ? ಅನೇಕ ಮಂದಿ ಅನೇಕ ಮುಖವಾಡ ಹಾಕಿಕೊಂಡು ಬಂದು ದ್ರೋಹ ಬಗೆದಿದ್ದಾರೆ. ಆದ್ದರಿಂದ ದಾನಿಗೆ ಪಾತ್ರಾಪಾತ್ರಗಳ ವಿವೇಚನೆ ಇರಬೇಕು. 'ಪಯಃಪಾನಂ ಭುಜಂಗಾನಾಂ ಕೇವಲಂ ವಿಷವರ್ಧನಂ' ಅಂದರೆ ಹಾಲು ಕುಡಿದ ಹಾವು ಕೇವಲ ವಿಷವನ್ನೇ ಉತ್ಪಾದಿಸುತ್ತದೆ; ಅಮೃತವನ್ನಲ್ಲ. ದಾನದ ಫಲ ಅಂತಾಗಬಾರದು.

ಸಾಮಾನ್ಯವಾಗಿ ಅಪಾತ್ರಕ್ಕೆ ಅಂದರೆ ಅಯೋಗ್ಯ ವ್ಯಕ್ತಿಗೆ ದಾನ, ಸ್ಥಾನ, ಗೌರವ, ಮನ್ನಣೆಗಳು ಸಲ್ಲುವುದುಂಟು. ಅಂತಹ ನೀಚರು ಲೋಕಕಂಟಕರೇ ಆಗಿ ಬಿಡುತ್ತಾರೆ. ಅವರು ತಾವೂ ಬದುಕುವುದಿಲ್ಲ ಅನ್ಯರನ್ನೂ ಬದುಕ ಬಿಡುವುದಿಲ್ಲ. ಅಂತಹ ಅಪಾತ್ರರನ್ನು ಗೌರವಿಸುವುದು ಸತ್ಪಾತ್ರರನ್ನು ತಿರಸ್ಕರಿಸಿದ್ದಕ್ಕಿಂತಲೂ ಅಪಾಯ! ಆದ್ದರಿಂದ ಮಹಾಕವಿ ರತ್ನಾಕರವರ್ಣಿ ಹೇಳುವಂತೆ : 'ಕೊಡಬೇಕು, ಕೊಡುವಲ್ಲಿ ಪಾತ್ರವರಿಯಬೇಕು. ಅರಿಯದೆ ಕೊಟ್ಟರೆ ಅದರ ದುಷ್ಫಲವನ್ನು ಸಾತ್ವಿಕನೂ ಅನುಭವಿಸಬೇಕಾಗುತ್ತದೆ'.

ಇಂತಹ ನೆಲೆಗಟ್ಟಿನ ಮೇಲೆ ನಿಲ್ಲಿಸಿ, ಎಚ್ಚರಿಸುವ ಸರ್ವಜ್ಞ ನಮಗೆ ಇಂದಿಗೂ ಎಂದಿಗೂ ಪ್ರಸ್ತುತವಾಗುತ್ತಾನೆ.

# ಆತ್ಮಹತ್ಯೆಯ ಹತ್ಯೆ

**– ಡಾ|| ಆರ್. ಆರ್. ಪಾಂಗಾಳ**

ಮಹಾಲಕ್ಷ್ಮಿ ಮೆಟರ್ನಿಟಿ ಹೋಂ... ಬರೇ ಹೆಣ್ಣು ಮಕ್ಕಳನ್ನು ಹೆರುವ ಹೆರಿಗೆ ಆಸ್ಪತ್ರೆ... ಮಹಾಲಕ್ಷ್ಮಿಯನ್ನೇ, ಬರೇ ಲಕ್ಷ್ಮಿ ಸಾಲದು ಮಹಾಲಕ್ಷ್ಮಿಯೇ ಬೇಕು ಹೆರಲು ಆಗ ತಾನೇ ಎಂಟು ಹತ್ತು ಸಾವಿರದ ಬಿಲ್ಲು ಬಂದೀತು. ಮಹಾಲಕ್ಷ್ಮಿ ಆಗ ತಾನೇ ಹುಟ್ಟಿಯಾಳು. ಇನ್ನೊಂದು ಎರಡು ದಿನಗಳಲ್ಲೇ ನನ್ನ ಕೈಕಾಲುಗಳಿಗೆ ಇನ್ಶೂರೆನ್ಸ್ ಮಾಡಬೇಕಾದೀತು. ಹಿಂದೊಮ್ಮೆ ಬೆದರಿಕೆ ಬಂದುದು ಮಾತ್ರ. ಅದಲ್ಲ, ಒಬ್ಬ ಬಾಡಿಗಾರ್ಡನ್ನಾದರೂ ನೇಮಿಸಬೇಕು, ಅದೂ ಮಾಡಿ ಆಗಿದೆ. ರಾತ್ರಿ ನಾನು ಹಿಂತಿರುಗುವಾಗ ನನ್ನ ಹಿಂದೆ ಹಿಂದೆ ನಿನ್ನ ನೆರಳಿನಲ್ಲಿ ಅಡಗಿ ಬರುತ್ತಾನೆ. ಕೈಯಲ್ಲಿ ಕೋಲು ಹಿಡಿದು ನಡೆದು ಬರುವಾಗ ಕಚ್ಚಲು ಬರುವ ಬೀದಿ ನಾಯಿಗಳನ್ನು ಓಡಿಸಲು ನಾನು ಮುಂದಾಗಬೇಕು. ಅವನು, ಬಲವಂತ ಪಾಂಡೆ ನನ್ನ ಬಾಡಿಗಾರ್ಡ್. ನನ್ನ ಹಿಂದೆ ಅಡಗಿಯಾನು. ಮೂವತ್ತು ಕೆಜಿಯ ಬಲವಂತನ ಹಿಂದಿನವರು ಶಿವಾಜಿಯ ಕಾಲದಲ್ಲೋ ಶಂಭಾಜಿಯಕಾಲದಲ್ಲೋ, ಅವರಿಗೆ ಗೊತ್ತಿರುವುದು ಆ ಹೆಸರು ಮಾತ್ರಾ ತಾನೇ, ಇಲ್ಲಿ ಬಂದವರಂತೆ. ಮನೆಯಲ್ಲಿ ಮರಾಠಿ ಆಡಿದರೂ ಕನ್ನಡ ಕಲಿತಿದ್ದಾನೆ. ಹಾಗೆ ಕಲಿಯದಿರಲು ಅವನೇನು ಸ್ವತಃ ಕನ್ನಡ ಸುಪುತ್ರನೇ ! ದುಡ್ಡಿರುವವರನ್ನು ಬಾಯಲ್ಲಿ ಸಿಲ್ವರ್‌ಸ್ಪೂನು ಇಟ್ಟುಕೊಂಡು ಹುಟ್ಟಿರುವವರು ಅನ್ನುತ್ತಾರೆ. ಕನ್ನಡದ ಸುಪುತ್ರ ಸುಪುತ್ರಿಯರೋ ಬಹಳ ದೊಡ್ಡವರು. ಬಾಯಲ್ಲಿ ತಮಿಳು ಸ್ಪೂನೋ, ಮರಾಠಿ ಸ್ಪೂನೋ, ಹಿಂದಿ ಸ್ಪೂನೋ ಹೊಸದಾಗಿ ಇಂಗ್ಲಿಷ್ ಸ್ಪೂನೋ ಇಟ್ಟುಕೊಂಡು ಹುಟ್ಟಿ ಬರುತ್ತಾರೆ.

ಶಾಲೆಯ ಹೊರಗೆ ಕ್ಷಮಿಸಿ ಅರ್ಥವಾಗಲಿಕ್ಕಿಲ್ಲ ಸ್ಕೂಲಿನ ಹೊರಗೆ ಗೇಟಿನ ಹೊರಗೆ ನಿಂತು ಕನ್ನಡ ಪರೀಕ್ಷಾ ಪತ್ರ ಹಾಳಾದ ತಲೆಯೇ 'ಕನ್ನಡ ಎಕ್ಸಾಮ್ ಪೇಪರ್ ಟಫ್ ಯಾ' 'ಕನ್ನಡ ಸಬ್ಜೆಕ್ಟ್ ಟಫ್ ಯಾ' ಅಂದಾಗ ಅವರನ್ನು ಪ್ರಶಂಸಿಸಲೇ ಬೇಕು. ಯಾಕೆಂದರೆ ಕನ್ನಡ ಅನ್ನುವ ಒಂದು ಶಬ್ದವನ್ನಾದರೂ ಕನ್ನಡದಲ್ಲೇ ಹೇಳಿದರಲ್ಲಾ ಅಂತ.

'ಕ್ಯಾ ಸಾಬ್ ಇತ್ನಾ ಪರೇಶಾನಿ ?' ಮಕ್ಬೂಲ್ ಅಂದಾಗ ಎಚ್ಚೆತ್ತ ನಾನು 'ಏನೂ ಇಲ್ಲಪ್ಪ' ಅದರರ್ಥ ಏನೋ ಇದೆ ಅಂತ. ರಾತ್ರಿ ನಾನು ಪರೇಶಾನಿ ಅಲ್ಲ ಕನ್ನಡದ ಬಗ್ಗೆ ಪರ-ರೇಶನು ಅಂತ ಅವನಿಗೇನು ಗೊತ್ತು. ಗಾಬರಿಯಿಂದ ಅವನು,

'ಸಾಬ್ ಬಚ್ಚೇ ಕೋ...'

'ಏನೂ ಆಗಿಲ್ಲಪ್ಪ, ನಿನ್ನ ಬಚ್ಚೆಗೆ ವಾಂತಿ ಆಯ್ತೂಂತ ತಲೆಕೆಡಿಸ್ಕೋ ಬೇಡ'' ಆದರೆ ಅವನ ಪರೇಶಾನಿ ಮಗುವಿನ ಪರೀಕ್ಷೆ ಮಾಡಿಯಾದ ಮೇಲೂ ಕೈಯಲ್ಲಿ ಪೆನ್ನು ಹಿಡಿದು ಏನೋ ಬರೆಯ ಹೊರಟವನು ಹಾಗೇ ಯೋಚನೆ ಮಾಡುತ್ತಾ ಕುಳಿತು ಬಿಟ್ಟೆನಲ್ಲಾ ಎಂದು. ದೇಹದ ವ್ಯಾಧಿಯನ್ನು ಉತ್ತಮಗೊಳಿಸುವುದು ಎಷ್ಟೋ ಸುಲಭ ಆದರೆ ಈ ಸಾಮಾಜಿಕ ಸಾಂಸ್ಕೃತಿಕ ವ್ಯಾಧಿ ಬಂದಳಿಕೆಯಂತೆ ಎಲ್ಲಾ ಕಡೆ ಸರ್ವವ್ಯಾಪಿಯಾಗಿದೆಯಲ್ಲ ಅನ್ಯ ಸಂಸ್ಕೃತಿಯ ಬಗ್ಗೆ ಪರ-ಶಾನ್ ನಮ್ಮ ಬಗ್ಗೆ ಪ-ರೇಷನು. ಮನೆಗಳಲ್ಲಿ ಮಾಡುವ ಅನ್ನ ಸಾರು, ಹುಳಿ, ಇಡ್ಲಿ, ಉಪ್ಪಿಟ್ಟುಗಳನ್ನು ಧೂಳು ಹಿಡಿದ ಸರ್ಕಾರಿ ಕಂತೆಗಳನ್ನು ಕೆದಕಿದಂತೆ ಹುಡ್ಕೊಬೇಕಾದೀತು. ಈಗಿನ ಮಕ್ಕಳಿಗೆ ಚಾಟ್, ಪಂಜಾಬಿ ಡಿಶಸ್ ಈಗ ಹೊಸದಾಗಿ ಬರ್ಗರ್, ಪಿಜಾ ಸಂಸ್ಕೃತಿ, ನಿಂಬೆಹಣ್ಣಿನ ಪಾನಕವೆಂದರೆ ರಾಮ ನವಮಿಯಂದು ದಾರಿಹೋಕರಿಗೆ ಸುರಿಯುವ ಕಚಡಾ ನೀರು. ಅದೂ ತಿಳಿದಿದೆಯೋ ಇಲ್ಲವೋ, ಈಗೆಲ್ಲಾ ಕೋಕ್, ಪೆಪ್ಸಿ.

'ಡಾಕ್ಟರ್ ಸಾಬ್ ....' ಅಳುವ ಧ್ವನಿಯಲ್ಲಿ ಅವನ ಹೆಂಡತಿ ಹಸೀನಾ

'ಏನೋ ಕೆಟ್ಟ ಯೋಚನೆ. ನಿನ್ನ ಮಗುವಿನ ಬಗ್ಗೆ ಅಲ್ಲ. ಹಾಳಾಗಿಹೋಗ್ಲಿಬಿಡು'

'ಕ್ಯೋಂ ಸಾಬ್ ನಾವು ಏನು ಮಾಡ್ತು'.

'ನಿನಗಲ್ಲಪ್ಪ ಹೇಳಿದ್ದು... ನಿನ್ನ ಮಗೂಗೇ ಏನೂ ತೊಂದ್ರೆ ಇಲ್ಲ. ಕೆಲ ಚಿಕ್ಕ ಮಕ್ಳು ಹಾಲು ಕುಡ್ಯೋವಾಗ ವಾಂತಿ ಮಾಡ್ಕೋತಾವೆ. ಕೆಲಸಲ ಅದು ನೆತ್ತಿಗೇರುತ್ತೆ...'

'ಅಂದ್ರೆ ತಲೆಒಳ್ಕಾ...'

'ನೆತ್ತಿಗೇರೋದಂದ್ರೆ ತಲೆಗೆ ಹತ್ತೋದಲ್ಲ. ಆ ಶಬ್ದಾನೇ ತಪ್ಪು. ಗಂಟ್ಲಿಂದ ನಾವು ಉಸಿರಾಡೋ ಶ್ವಾಸಕೋಶದೊಳಗೆ ಹೋದಾಗ ಉಸಿರುಕಟ್ಟಿದ್ಹಾಗೆ ಆಗುತ್ತೆ. ಅಷ್ಟೇ'.

'ಅತ್ತು ಅತ್ತು ದಂ ಹಿಡ್ಕೊಂಡ್ತು. ವಾಂತಿ ಆಯ್ತು. ನಮ್ದುಕ್ಕೆ ಬಯ ಆಗಿ ಆಸ್ಪತ್ರೆ ಒಡ್ತು. ಅಲ್ಲಿ ಅಡ್ಮಿಟ್ಟು ಮಾಡ್ತು'.

'ಆ ಸಮಯದಲ್ಲಿ ಭಯ ಪಟ್ಕೊಂಡ್ರೆ ಅಷ್ಟೇನೇ ತಲೆ ಬೋಳಿಸೋಕೇ ನೋಡ್ತಾರೆ ಎಲ್ರೂ.

'ಸಾಬ್ ನಮ್ ಕೈನಾಗೆ ಆಗಲ್ಲ. ಎಂಟ್ಸಾವ್ರ ಕರ್ಚಾಯ್ತು. ಮನೇತಾವ ಇರೋ ಬಂಗಾರ ಮಾರ್‍ತು, ಈಗ ಏನೂ ಇಲ್ಲ ಸಾಬ್. ನಿಮ್ತಾವ ಬಂತು'.

'ಏನು ಕೆಲ್ಸ ಮಾಡ್ತಿಯಪ್ಪಾ ನೀನು ?'

'ಕಾಲಿ ಶೀಶ ಪೇಪರು ಅಂತಾ ದಾರೀಲಿ ಕೂಗ್ಕೊಂಡು...'

'ಹಾಗಿರೋವಾಗ ಮತ್ಯಾಕೆ ಪ್ರೈವೇಟ್ ನರ್ಸಿಂಗ್ ಹೋಂಗೆ ಹೋದೆ. ಸರ್ಕಾರಿ ಆಸ್ಪತ್ರೆ ಇಲ್ವಾ ?'

'ಆ ವಕ್ತ್‌ನಾಗ...'

'ಎಲ್ಲಾದ್ರೂ ಹಾಳಾಗು... ಆ ಪೇಪರೆಲ್ಲಾ ಕೊಡು. ಏನೆಲ್ಲಾ ಮಾಡಿದ್ದಾರಂತ ನೋಡೋಣ''.

ಪೇಪರಿನ ಕಂತೆ, ರಕ್ತ ಮಲ ಮೂತ್ರಗಳ ಮಾಮೂಲು ಪರೀಕ್ಷೆ, ಹೊಟ್ಟೆಯ ಸ್ಕ್ಯಾನಿಂಗ್, ತಲೆಯ ಸಿ.ಟಿ. ಸ್ಕ್ಯಾನ್, ಬೆನ್ನು ಮೂಳೆಯಿಂದ ತೆಗೆದ ನೀರಿನ ಕಲ್ಚರ್ ಇನ್ನೂ ದೊಡ್ಡದಾಗಿದೆ. ಲಿಸ್ಟು...'' ಎಲ್ಲಾ ಪರೀಕ್ಷೆಯ ರಿಸಲ್ಟು ನಾರ್ಮಲ್. ಒಟ್ಟು ಎಷ್ಟಾಯ್ತು ಅಂದೆ ? ಎಂಟು ಸಾವಿರಾನ. ಒಂದು ಮಗೂನ ಒಂದು ಕಾಯಿಲೆಗೇ ಎಂಟಾಯ್ತು. ಇನ್ನು ನೀನು ಎಂಟೆಂಟು ಮಕ್ಳು ಹುಟ್ಸಿದ್ರೆ ಮನೇನೇ ಮಾರ್ಬೇಕಾದೀತು''.

''ಇದು ಒಂದೇ ಬಚ್ಚಾ...''

''ನಾನೊಂದು ಡ್ರಾಪ್ಸು ಬರ್ಕೊಡ್ತೀನಿ. ಮೂರು ದಿನ ಹಾಕು ಎಲ್ಲಾ ಸರಿಹೋಗುತ್ತೆ''. ಆದರೂ ಅವನಿಗೆ ಎಲ್ಲಿಲ್ಲದ ಶಂಕೆ. ನಾಲ್ಕು ದಿನ ಅಡ್ಮಿಟ್ ಮಾಡಿ ಅಷ್ಟೆಲ್ಲಾ ಪರೀಕ್ಷೆ ಮಾಡಿಸಿ ಎಂಟು ಸಾವಿರ ಬಿಲ್ಲು ಝಾಡಿಸಿದ್ದನ್ನು ನಾನು ಏನೂ ಇಲ್ಲ, ಅಂದೆನಲ್ಲ. ಅವನ ಶಂಕೆ ನನಗೆ ಅರ್ಥವಾಗುತ್ತದೆ.

'ನೋಡಯ್ಯಾ ನಾನು ಹೇಳಿದ್ಹಾಗೆ ಕೇಳು. ಏನೂ ಆಗಿಲ್ಲ''.

ಅವನಿಗೆ ಮತ್ತು ಧೈರ್ಯ ಬರುವಂತೆ.

'ನೋಡಪ್ಪಾ ಹೋದ್ವಾರ ಹೀಗೆ ಒಂದು ಕೇಸು ಬಂದಿತ್ತು. ಹೊಟ್ಟೆ ನೋವೂಂತ. ಅಲ್ಲಿಗೇನೇ ಹೋಗಿ ಬಂದಿದ್ದು. ಅಪೆಂಡಿಕ್ಸು ಆಪರೇಶನು ಮಾಡ್ಬೇಕೂ ಅಂದ್ರಂತೆ. ಮನೇನಲ್ಲಿ ಕೇಳ್ಕೊಂಡು ಬರ್ತೀನಿ ಅಂದವ್ನು ಇಲ್ಲಿ ಓಡ್ಬಂದ. ಪರೀಕ್ಷೆ ಮಾಡಿನೋಡ್ದೆ. ಹಿಂದಿನ ದಿನಾನೇ ತಿರುಪತಿಗೆ ಹೋಗಿ ಬಂದಿದ್ನಂತೆ. ಹೊಟ್ಟೆ ನೋವು ವಾಂತಿ ಭೇದಿ ಇತ್ತು. ಅದೂ ಎಡಬದೀಲೇನೇ ನೋವು. ಅಲ್ಲಿ ಹಾಗೆ ಹೇಳಿದ್ದಕ್ಕೆ ಎಡ ಬದೀ ಅಪೆಂಡಿಕ್ಸು ಆಪರೇಶನು ಮಾಡ್ದೇ ಇದ್ರೆ ಒಡ್ದು ಹೋಗುತ್ತೆ. ನಾನಂದೆ ಇನ್ಫೆಕ್ಷನ್ ಆಗಿದೆ

ಮಾತ್ರೆ ಬರ್ಕೋಡ್ತೀನಿ ಅಂದು ಬರ್ಕೊಟ್ಟೆ. ಅವ್ನಿಗೂ ನಿನ್ನ ತರಾನೇ ಸಂಶಯ ಬಂತು. ಆದ್ರೂ ಮಾತ್ರೆ ತಗೊಂಡ. ಎರ್ಡು ದಿನ್ದಲ್ಲೇ ಸರಿ ಹೋ:ದ''.

ಅವನಿಗೆ ಧೈರ್ಯ ಬಂತೋ ಇಲ್ಲವೋ.

'ಠೀಕ್ ಸಾಬ್ ಊಪರ್ ವಾಲೇಕಾ ಮೆಹರ್‌ಬಾನಿ' ಅಂದುಕ್ಕೊಂಡು ಹೋದ. ಹೊರಗೆ ಹೋಗುವಾಗ ಹೆಂಡತಿಯೊಡನೆ ಉರ್ದುವಿನಲ್ಲಿ ಹೇಳಿಕೊಂಡು ಹೋದುದು ನನ್ನ ಕಿವಿಗೂ ಬಿದ್ದರೂ ಸುಮ್ಮನಿರುತ್ತೇನೆ.

'ಎಲ್ರೂ ಹೀಗೆ ಹೇಳೋದು. ಯಾರು ತಾವು ಮಾಡಿದ್ದು ಸರಿ ಇಲ್ಲ. ಅಂತಾರೆ?'

ಅವನ ಊಪರ್‌ವಾಲಾ ನನ್ನ ಊಪರೂ ಇರುವುದರಿಂದ ನನ್ನ ಮೇಲಿನ ಮೆಹರ್‌ಬಾನಿ ಮೇಜಬಾನಿ ಆಗದೆ ಉಳಿದಿದೆ.

ಯಾರಾದರೂ ಡಾಕ್ಟರಾಗಲು ಏನು ವೈಯಕ್ತಿಕ ಕ್ವಾಲಿಫಿಕೇಶನು ಬೇಕು. ಅಂದರೆ ನಾನನ್ನುವುದು ಸೇವಾ ಮನೋಭಾವ ದುಡ್ಡು ಸುಲಿಯುವ ದುರಾಸೆ. ತಾಳ್ಮೆ, ಮುಂಗೋಪ ಇವಾವುವೂ ಅಲ್ಲ. ಅವಮಾನ ಸಹಿಸುವ ತಾಕ್ಕತ್ತು ಅಂತ.

ಮರುದಿನ ಬಂದ ಅವನು.

''ತುಮ್ಹಾರೇ ಹಾತ್ ಮೇ ಶಫಾ ಹೈ''

ಮಗುವಿನ ಅದೃಷ್ಟ ಚೆನ್ನಾಗಿತ್ತು. ಅದು ಬದುಕಿಕೊಂಡಿತು. ಅವನು ಹೇಳಿದ ಹಾಗೆ ನನ್ನ ಕೈಯಿಯ ಶಫಾದಿಂದಲ್ಲ. ದುರದೃಷ್ಟವಶಾತ್ ಆ ಮಗುವಿಗೆ ಏನಾದರೂ ಹೆಚ್ಚು ಕಡಿಮೆ ಆಗಿದ್ದಲ್ಲಿ ಆಗ ಆ ಶಫಾ ಎಲ್ಲಿರುತ್ತಿತ್ತು. ಅದು ಆಗ ನನಗೆ ಫಾಶಿ ಆಗುತ್ತಿರಲಿಲ್ಲವೇ'.

ಸುಮಾರು ಎರಡು ತಿಂಗಳುಗಳೇ ಕಳೆದಿರಬಹುದು. ನಾಲ್ಕು ಜನ ಅದೇ ಮಕ್ಬೂಲನನ್ನು ಎತ್ತಿಕೊಂಡು ತಳ್ಳಿಕೊಂಡು ಅರ್ಧ ಎಳೆದುಕೊಂಡು ಬಂದು ಮಂಚದ ಮೇಲೆ ದೊಪ್ಪನೇ ಹಾಕಿದರು. ಹತ್ತಿರ ಹೋಗುವಷ್ಟರಲ್ಲೇ ತಿಳಿಯುತ್ತದೆ. ವಾಸನೆಯಿಂದ ಟಿಕ್-20 ಪಾಯಿಸನ್ ಅಂತ. ಮೈಮೇಲೆಲ್ಲಾ ವಾಂತಿ ಮಾಡಿಕೊಂಡಿದ್ದ. ತಕ್ಷಣ ಅವನ ಆ ಬಟ್ಟೆಗಳನ್ನು ಬಿಚ್ಚಿಸಿ ಬೇರೆ ಬಟ್ಟೆ ಹಾಕಿಸಿ ಪರೀಕ್ಷೆ ಮಾಡಿ ಗ್ಲೂಕೋಸು ಡ್ರಿಪ್ ಹಾಕಿ ಅದರಲ್ಲಿ ಇಂಜಕ್ಷನು ಹಾಕುವ ತನಕ ನಾನು ಏನೂ ಅಂದಿರಲಿಲ್ಲ. ಅಲ್ಲೇ ಇದ್ದ ಅವನ ಅಣ್ಣ ಮಸೂದ್ ಬಿಲ್ಡಿಂಗ್ ಕಂಟ್ರಾಕ್ಟರು ಅವನನ್ನು ಕರೆದು ''ಯಾಕಪ್ಪಾ ಏನಾಯ್ತು ? ಯಾಕೆ ಹೀಗೆ ಮಾಡ್ಕೊಂಡ''.

''ನಂಗೊತ್ತಿಲ್ಲ ಸಾಬ್. ಅವನ್ನ ನೋಡೀನೇ ನಾಕು ತಿಂಗಳಾಯ್ತು''.

"ಇದು ಮೆಡಿಕೋ ಲೀಗಲ್ ಕೇಸು. ನಾನು ಏನೂ ಮಾಡಕ್ಕಾಗಲ್ಲ. ಈಗ ಎಮರ್ಜನ್ಸಿಗೆ ಟ್ರೀಟ್‌ಮೆಂಟ್ ಕೊಡ್ತೀನಿ. ಆಮೇಲೆ ಸರ್ಕಾರಿ ಆಸ್ಪತ್ರೆಗೆ ಕರ್ಕೊಂಡು ಹೋಗ್ಬೇಕು".

"ಸರ್ಕಾರಿ ಆಸ್ಪತ್ರೆ ಬೇಡ ಸಾಬ್. ನಿಮ್ ಕೈನಾಗೆ ಶಫಾ ಐತೇಂತ ಹೇಳ್ತು".

"ಯಾವಾಗ?"

'ಅದೇ ಬಚ್ಚೇಕೂ ಸಕತ್ ಖಾಯ್ಲೆ ಬಂತಲ್ಲಾ. ಆಗ ನೀನೇ ವಾಸಿ ಮಾಡಿದ್ದೂಂತ...'

"ಅದಾಗಿ ಎರಡೇ ತಿಂಗಳಾಗಿದ್ದು. ನೋಡೀನೇ ನಾಲ್ಕು ತಿಂಗಳಾಯ್ತು ಅಂದೆ. ಅವನ ಮುಖದಲ್ಲಿ ಕಳ್ಳತನದ ಛಾಯೆ ಹರಡಿ ಮಾಯವಾಯ್ತು. ರೆಡ್ಡಿಗಳಂತೆ ಕತ್ತಿಗೆ ಎರಡು ನಾಯಿಪಟ್ಟಿಯಂತ ಬಂಗಾರದ ಚೈನು, ಕೈಗೆ ಕೋಳದಂತಾ ಚೈನು, ಹತ್ತು ಬೆರಳಿಗೆ ಹನ್ನೆರಡೂವರೆ ಉಂಗುರ ಆಸಾಮಿ ಗಟ್ಟಿಕುಳ. ಹೊರಗೆ ಮಾರುತಿ ಕಾರು ಖಂಡಿತಾ ಇರಬಹುದು. ಕ್ವಮಿಸಿ ಎಸ್ಟೀಮ್ ಸಿಯಲ್ಲೋ ಯಾವುದೋ ಒಂದು.

ಆದರೆ ಮಕ್ಸೂದ್ ಖಾಲಿಶೀಶೆ ಪೇಪರ್.

'ನೋಡಿಪ್ಪಾ ಇಲ್ಲಿ ಆಗೋಲ್ಲ. ಎಲ್ಲಾದ್ರೂ ಅಡ್ಮಿಟ್ ಮಾಡ್ಬೇಕು. ಆಸ್ಪತ್ರೆ, ನರ್ಸಿಂಗ್ ಹೋಂ ಎಲ್ಲಾದ್ರೂ..."

'ನಾವು ಗರೀಬ್ ಸಾಬ್......'

ಗರಿ ಗರಿ ಬಕ್ರಾ ತಿನ್ನುವ ಗರೀಬಗಳು.

ಪಕ್ಕದ ರೂಂನಲ್ಲಿ ಗ್ಲೂಕೋಸು ಡ್ರಿಪ್ ಹೋಗುತ್ತಾ ಇರುವಾಗ ಬೇರೆ ಯಾರೂ ಇಲ್ಲದಿದುದರಿಂದ ಕಣ್ಣು ಮುಚ್ಚಿ ಕುರ್ಚಿಗೆ ಒರಗಿ ಕುಳಿತೆ. ಕಣ್ಣುಮುಚ್ಚಿದಾಗಲೆಲ್ಲಾ

'ಖಾಲಿ ಶೀಶೇ ಪೇಪರ್... ಖಾಲಿ ಶೀಶೆ ಪೇಪರ್...'

'ಎರಡು ಬಾಟಲು ಗ್ಲೂಕೋಸ್ ಹೋಗುವುದರೊಳಗೆ ಚೇತರಿಸಿಕೊಂಡ ಇನ್ನೆರಡು ಹಾಕಿ ಆಯ್ತು. ಅವನೊಡನೆ ಅಡ್ಮಿಟು ಆಗಬೇಕು ಅಂದಾಗ ಕಾಲು ಹಿಡಿಯು ಬಂದ. ದೇವರಿದ್ದಾನೆ. ಬೇಕಾದಲ್ಲಿ ಕಾಪಾಡಿಯಾನು ಇಲ್ಲದಿದ್ದಲ್ಲಿ ಕರೆದೊಯ್ದಾನು.

ಮರುದಿನ ಅವನು ಬರುತ್ತಾನೆ. ಸಾಕಷ್ಟು ಸುಧಾರಿಸಿಕೊಂಡಿದ್ದಾನೆ. ಊಪರಿನ ಮೆಹರ್‌ಬಾನಿ ಉಳಿಯಲು ಸಾಕಷ್ಟಿದೆ. ಹೋಗಲಿಲ್ಲ.

'ಯಾಕಯ್ಯ ಹೀಗೆ ಮಾಡ್ಕೊಂಡೆ"

''ಕ್ಯಾ ಕರ್ನಾ ಸಾಬ್ ಸಾಲ....''

''ಏನಯ್ಯಾ ಎರಡು ತಿಂಗಳ ಹಿಂದೆ ಆದ ಎಂಟು ಸಾವಿರ ಸಾಲಕ್ಕೆ ಈಗ ಪ್ರಾಣ ಕಳ್ಕೋತಾರಾ?'' ನಿಂಗೇನಾದ್ರೂ ಬುದ್ಧಿ ಇದ್ಯಾ? ನೀನು ಹೋದ್ರೆ ನಿನ್ನ ಹೆಂಡ್ತಿ ಮಕ್ಳ ಯೋಚ್ನೆ ಮಾಡೋವ್ರು ಯಾರು?''

''ಇನ್ನೆಲ್ಲಿ ಸಾಬ್ ಹೆಂಡ್ತಿ ಮಕ್ಳು ? ಪರ್ಮನೆಂಟು ತಲಾಕು ಮೇರೀಕೋ''.

ನಾನು ' ಕ್ಯಾ?'' ಅಂದೆ.

''ಸಾಲ ತೀರ್ಸೋಕಾಗ್ದೇ ಹೊಟ್ಟೆ ಹಸಿವುತಾಳಕಾಗ್ದೆ ಎಳ್ಡು ಹಪ್ತೆ ಹಿಂದೆ ಅವಳೂ ಟಿಕ್ ಟ್ವೆಂಟಿ ತಕೊಂಡ್ಳು. ನಿಮ್ತಾವ ಬರಾಣ ಅಂದ್ರೆ ರಾತ್ರಿ. ಅದೇ ನರ್ಸಿಂಗು ಹೋಂ ಹೋಯ್ತು. ಬಚ್ಚಾ ಆ ರಾತ್ರೀನೇ ಹೋಯ್ತು. ಬೀವಿ ನಾಲ್ಕು ದಿನ ಇದ್ದು ಹೋಯ್ತು. ಹತ್ಸಾವ್ರ ಪುನಃ ಸಾಲ ಆಯ್ತು. ಪೋಲಿಸು ಕಾಟ - ಅವ್ರಿಗೂ ಖರ್ಚು''. ಶ್ರೀ ಮಹಾಲಕ್ಷ್ಮಿ ಮೆಟರ್ನಿಟಿ ಪರ್ವಾಗಿಲ್ವೇ. ಮಕ್ಕಳ ಡೆಲಿವರಿ ಒಂದು ಬಿಟ್ಟು ಎಲ್ಲಾ ರೀತಿಯಲ್ಲೂ ಲಕ್ಷ್ಮಿ (ದುಡ್ಡು) ಡೆಲಿವರಿ ಮಾಡುತ್ತಲ್ಲಾ ಅದು ಕೊಂಡು.

''ನಿಮ್ಮಣ್ಣ ಆ ಕಾಮಣ್ಣ ಇದ್ದಾನಲ್ಲಯ್ಯ...''

''ಕಾಮಣ್ಣ ಅಲ್ಲ ಸಾಬ್ ಮಸೂದ್ ಅಂತ...''

''ಅವನನೇ ಕಾಮಣ್ಣ ಅಂದದ್ದು. ಬೀದಿ ಕಾಮಣ್ಣಂತರಾ ಇದ್ದಾನಲ್ಲಯ್ಯಾ. ಅಷ್ಟೊಂದು ಬಂಗಾರ ಎಲ್ಲಾ ಹಾಕ್ಕೊಂಡು ಜೋರಾಗಿ ಇದ್ದಾನಲ್ಲಯ್ಯಾ. ಅವ್ನೇನೂ ಸಹಾಯ ಮಾಡಲ್ವಾ ?''

ಅವನು ಏನೂ ಅನ್ನುವುದಿಲ್ಲ. ''ಸಾಬ್ ನಂಗೆ ಉಳಿದಿರೋದು ಖಾಲಿ ಶೀಶೆ ಮಾರೋ ಗಾಡಿ. ಹದ್ನೆಂಟು ಸಾವ್ರ ಸಾಲ ಅಷ್ಟೇ'', ಅದ್ಕೇ ಸಾಯೋದು ಉತ್ತಮಾಂತ. ಆದ್ರೆ ನೀವು ಬಿಡಲ್ಲ. ನಿಮ್ಮ ಕೈ ಶಫಾ''.

ನನ್ನ ದವಾಖಾನೆಯ ಪಕ್ಕದ ಮನೆಯಿಂದ ಪ್ರತಿ ದಿನ ಗೋಬಿಮಂಚೂರಿ ಮಾಡುವ ಅದಕ್ಕೆ ಬೆಳ್ಳುಳ್ಳಿ ಫೈ ಮಾಡುವ ವಾಸನೆ ನನ್ನ ಮೂಗಿಗೆ ಬಡಿಯುತ್ತದೆ. ಈಗಿನ ಫ್ಯಾಶನ್ ರೋಡ್ ಸೈಡ್. ಅಲ್ಲ ಫುಟ್‌ಪಾತ್ ಸೈಡ್ ರಾತ್ರಿ ತಿನ್ನುವ ಜನಕ್ಕಾಗಿ ಪಕ್ಕದ ಮನೆಯ ಗೋಪಾಲನೂ ಗಾಡಿಯಲ್ಲಿ ತಿಂಡಿ ಬಿಸ್‌ನೆಸ್ ಮಾಡ್ತಾ ಇದ್ದಾನೆ. ನನ್ನನ್ನು ಬರಹೇಳಿದ್ದ. ತಿನ್ನದಿದ್ದರೂ ನೋಡಿ ಬಂದೆ.

''ಪರ್ವಾಗಿಲ್ಲಯ್ಯ ನೀನು. ನಿನ್ನ ಹೆಸರು ಗೋಪಾಲ ಗಾಡೀದ್ದು ಮಕ್ಬೂಲ.

ಮಾರೋದು ಗೋಬಿ ಮಂಚೂರಿ'' ಅವನಿಗೆ ಅರ್ಥವಾಯಿತೋ ಇಲ್ಲವೋ ಹಲ್ಲುಕಿರಿದ.

ಮುಂದೊಂದು ದಿನ ಬಿ.ಕೆ. ಮಸೂದ (ಬೀದಿ ಕಾಮಣ್ಣ ಮಸೂದ), ಅವನ ತಮ್ಮ ಮಕ್ಬೂದನಿಗೆ ತಿಳಿದರೆ ಕೋಪ ಬಂದೀತು. ನನ್ನಲ್ಲಿಗೆ ಬಂದಾಗ 'ನಿನ್ನ ತಮ್ಮ ಹ್ಯಾಗಿದ್ದಾನಪ್ಪಾ ಈಗ. ಪುನಃ ಟಿಕ್ ಟ್ವೆಂಟಿ ಬಾಟ್ಲು ಸಿಕ್ತಾ ಇಲ್ಲಾ ನಾನೊಂದು ತರ್ಸಿ ಕೊಡ್ಲಾ' ಅಂದಾಗ.

'ಆ ಹಲ್ಕಾ ಸುವರ್ ನಾಮರ್ದ್ ಕಾ ಬಚ್ಚಾ ಪುನಃ ಟಿಕ್ ಟ್ವೆಂಟಿ ಕುಡ್ದು ಸತ್ತು ಹೋಯ್ತು ಸಾಬ್. ನಮ್ದೆಲ್ಲಾ ಬದ್ನಾಮ್ ಆಯ್ತು. ಪೈಸಾನೂ ಖರ್ಚಾಯ್ತು'.

''ಎಷ್ಟು ?''

'' ಎಳ್ಡು ಸಾವ್ರ''

ನನ್ನ ತಲೆಯಲ್ಲಿ ಪುನಃ ಖಾಲಿ ಶೀಶ ಪೇಪರೂ – ಖಾಲಿ ಶೀಶ ಪೇಪರು.

ಸಂಜೆ ಕೆಲಸ ಮುಗಿಸಿ ಹಿಂದಿರುಗುವಾಗ ಗೋಪಾಲ ಕರೆಯುತ್ತಾನೆ. ''ಸಾರ್ ಇವತ್ತಾದ್ರೂ ಒಂದು ಗೋಬಿ''.

ನಿಧಾನವಾಗಿ ಅವನ ಗಾಡಿ ಇದ್ದಲ್ಲಿಗೆ ತೆರಳುವಷ್ಟರಲ್ಲಿ ಮಸೂದ್ ಅಲ್ಲಿಯ ಗೋಬಿ ತಿಂದು ತೆರಳುತ್ತಿರುತ್ತಾನೆ.

''ಗೋಪಾಲ ಈ ಗಾಡಿ ಎಷ್ಟಕ್ಕೆ ಕೊಂಡ್ಕೊಂಡೆ''.

ಎರಡು ಸಾವಿರ ಈಗ ಹೋದ್ನಲ್ಲಾ ಅವ್ನಿಂದ್ಲೇ ಕೊಂಡ್ಕೊಂಡೆ. ಯಾಕ್ಸಾರ್ ನಿಮ್ಗೂ ಈ ಗಾಡಿ ಮೇಲೆ ಕಣ್ಣು''.

ಆ ಗಾಡಿ ಮೇಲೆ ಗೋಬಿಯ ಬದಲು ಖಾಲಿ ಶೀಶೆ ಪೇಪರು ಕಂಡು ಬರುತ್ತದೆ.

''ಸಾರಿ ಗೋಪಾಲ... ಇನ್ನೊಂದು ದಿನ'' 'ಅಲ್ಲಿಂದ ಹೊರಡುತ್ತೇನೆ. ನನ್ನ ಕಣ್ಣ ಮುಂದೆ ನಿಲ್ಲುವುದು ಮಹಾಲಕ್ಷ್ಮಿ, ಮಕ್ಬೂಲ, ಮಸೂದ. ಅವನ ಖಾಲಿ ಶೀಶೆ ಪೇಪರಿನ ಗಾಡಿಯ ಮೇಲೆ ಬರೆಯ ಬೇಕೆನ್ನಿಸುತ್ತದೆ – 'ಇದು ಆತ್ಮಹತ್ಯೆಯಲ್ಲ ಹತ್ಯೆ'.

# ಕಾರಂತರಿಗೆ ನಮನ

ಬೆಟ್ಟದಂತಹ ಜೀವ, ಕಡಲ ವೈಶಾಲ್ಯ
ಮುಟ್ಟಿದ್ದೆಲ್ಲವೂ ಚಿನ್ನ, ಮೇರು ವ್ಯಕ್ತಿತ್ವ
ದಿಟ್ಟತನ ಸಾಕಾರ, ಮಾತು ಕೃತಿ ನಿಖರ
ಮೆಟ್ಟಿದ್ದು ಮಾನವತೆಯುತ್ತುಂಗ ಶಿಖರ

ಸಾಹಿತ್ಯ ವಿಜ್ಞಾನ ಲಲಿತ ಕಲೆಯೆಂಬ
ಮೂರುಲೋಕದಿ ಬೆಳಗುತಿಹ ದೀಪಸ್ತಂಭ
ಕಾದಂಬರಿಗಳ ಲೋಕದ ಸಾರ್ವಭೌಮ
ಇವರಿಂದ ಅಮರನಾದನು ದಲಿತ ಚೋಮ

ಸ್ವಾತಂತ್ರ್ಯ ಹೋರಾಟ, ಖಾದಿ ಮಾರಾಟ
ಗಾಂಧಿಯೊಡನಾಟ, ಜಗದಗಲ ತಿರುಗಾಟ
ಸ್ತ್ರೀ ದಲಿತರುದ್ಧಾರ, ಮಕ್ಕಳಿಗೆ ಪಾಠ
ನೃತ್ಯ, ನಾಟಕ, ಯಕ್ಷಗಾನ ರಸದೂಟ

ಪ್ರಾಮಾಣಿಕತೆ, ಕರುಣೆ, ಜೀವನದ ಪ್ರೀತಿ
ಕಷ್ಟ ಸಹಿಸುತ ಬಾಳ ಮುಗಿಸುವ ರೀತಿ
ಅನ್ಯಾಯವೆದುರಿಸುವ ಛಾತಿ, ನಿರ್ಭೀತಿ
ದೀನ, ದುರ್ಬಲ, ಜೀವಪರ ಬಾಳ ನೀತಿ

ಋಣವ ತೀರಿಸಬೇಕು ಬದುಕಿನಲಿ ನಾವು
ಪಡೆದುದಕು ಮಿಗಿಲಾಗಿ ಕೊಡಬೇಕು ನಾವು
ಈ ಪಾಠ ಕಲಿಸಿದಂತಹ ಕರ್ಮಯೋಗಿ
ಅಂಥ ಕಾರಂತರಿಗೆ ನಮಿಸೋಣ ಬಾಗಿ

ಶಿವರಾಮ ಕಾರಂತ ಗೆದ್ದಿಹರು ಸಾವ
ಅಳಿದಮೇಲೂ ಉಳಿದು ಬೆಳಗುತಿವ ಜೀವ
ಅವರ ಬಾಳ್ವೆಯ ಬೆಳಕು ನಮ್ಮ ಬದುಕಿನಲಿ
ಧ್ರುವತಾರೆಯಾಗಿ ಮುನ್ನಡೆಸುತ್ತಲಿರಲಿ

– ಬಿ.ವಿ. ಕೆದಿಲಾಯ

Edited and Published by Smt. Prema Bhat, President, Shivarama Karantha Vedike (Regd.), No. 307, Second Block, 17th Cross, R.T. Nagar, Bangalore – 560 032, for private circulation only.